ಶಕ್ತಿಭದ್ರ ಮಹಾಕವಿಯ

# ಆಶ್ಚರ್ಯ ಚೂಡಾಮಣಿ

(ಕನ್ನಡ)




ಬರೆದವರು

ವಿದ್ವಾನ್ ಎಂ. ರಾಮಕೃಷ್ಣಭಟ್ಟ, ಎಂ. ಎ.

ಸಂಸ್ಕೃತ ಲೆಕ್ಚರರ್ ಮತ್ತು ಸೂಪರಿಂಟೆಂಡೆಂಟ್ ಆಫ್

ಇಂಡಿಯನ್ ಲಾಂಗ್ವೇಜಸ್

ಸೈಂಟ್ ಜೋಸೆಫ್ಸ್ ಕಾಲೇಜ್, ಬೆಂಗಳೂರು.





ದೇಶಬಂಧು ಮುದ್ರಣಾಲಯ, ಕೋಟೆ-ಬೆಂಗಳೂರು ಸಿಟಿ.





೧೯೪೩





[ಬೆಲೆ ೧—೪—೦

# ಸಮರ್ಪಣೆ

ಶ್ರೀರಾಮ ಭಕ್ತವತ್ಸಲ
ತೋರೆನ್ನೊಳ್ ಕೃಪೆಯನತುಲವಿಕ್ರಮ ಸೀತಾ ।
ಕಾರಣದಿಂ ರಕ್ಕಸರಂ
ಮಾರಿಗೆ ಬಲಿಯಿತ್ತ ದೇವದೇವನೆ ಕಾಯ್ಕೆ ||೧||

ರಾಮನೊಳನುಪಮಭಕ್ತಿ
ಕಾಮಿತಮಂ ಕುಡುಗುಮೆಲ್ಲಮಂ ಪರದೊಳಮಿ ।
ನ್ನೀ ಮಹಿಯೊಳ್ಬೇಳ್ವುದದೇಂ
ರಾಮಾರ್ಪಿತಜೀವಿತಂಗೆ ತಲ್ಲಳಮಿಲ್ಲಂ ||೨||

ಕಾವುದು ಸೀತಾರಮಣನೆ
ಪಾವನನಾಮಾ ದಯಾರ್ದ್ರಮಾನಸ ಹನುಮ ।
ತ್ಸೇವಿತ ಶರಣಾಗತರನ
ದಾವಗಮೆಮ್ಮಂ ತ್ರಿಲೋಕಸಂಸ್ತುತಮಹಿಮಾ ||೩||

ದಶರಥರಾಮ ಲೋಗರನನುಗ್ರಹಿಸಲ್ತಳೆದೈ ನೃರೂಪಮಂ
ವಿಶದಚರಿತ್ರದಿಂ ಮುದದೆ ದುಷ್ಟರುಮಂ ಸ್ವಪದಾಬ್ಜದೊಳ್ನಿವೇ ।
ಶಿಸಿ ಪೊರೆದೈ ಅದೆಂತು ನೆರೆ ಬಣ್ಣಿಪೆನಾಂ ಕೃಪೆಯಂ ನಿನತ್ತು ಭ
ಕ್ತಿಸುಲಭ ನಿನ್ನನಾಶ್ರಯಿಪ ಕಿಂಕರರಂ ಪೊರೆಯೆಮ್ಮನಾವಗಂ ||೪||

---

**ನನ್ನ ಹಿರಿಯಣ್ಣ ಕೈ. ವಾ. ಎಂ. ನಾರಾಯಣಭಟ್ಟರ**
**ಸವಿನೆನಹಿಗಾಗಿ ಈ ಹೊತ್ತಗೆವೂವನ್ನು**
**ಶ್ರೀರಾಮಚಂದ್ರನ ಪಾದಾಂಬುಜದಲ್ಲಿ**
**ಸಮರ್ಪಿಸುವೆನು.**

---

# ಮುನ್ನುಡಿ

ಪ್ರತಿಯೊಂದು ಪುಸ್ತಕವನ್ನು ಓದುಗರ ಕೈಯಲ್ಲಿರಿಸುವಾಗ ಏನಾದರೊಂದು ವಿಶೇಷ ಕಾರಣವನ್ನು ಗ್ರಂಥಕಾರನಾಗಲಿ, ಪ್ರಕಾಶಕರಾಗಲಿ ಕೊಡುವುದು ವಾಡಿಕೆ. ನಾನಾದರೆ ಅಂತಹ ಕಾರಣವಾವುದನ್ನೂ ಕೊಡಲೆಳಸುವುದಿಲ್ಲ; ಏಕೆಂದರೆ ನನ್ನೀ ಕೃತಿಯಲ್ಲಿ ಓದುಗರ ಬಗೆಯನ್ನು ಸೂರೆಗೊಳ್ಳುವ ಯಾವ ಬೆಡಗೂ ಇರುವುದೆಂದು ನಾನೆಣಿಸುವುದಿಲ್ಲ. ಅಂತಹ ಗುಣವಾವುದಾದರೂ ಇದರಲ್ಲಿದ್ದರೆ ಅದು ಮೂಲಗ್ರಂಥಕಾರನಾದ ಶಕ್ತಿಭದ್ರಮಹಾಕವಿಯ ಪಾಲಿಗೆ ಸೇರಿದುದಾಗಿದೆ. ಈ ನಾಟಕವು ಹೃದಯಹಾರಿಯಾಗಿ ಕಂಡುಬಂದುದರಿಂದ ಇದನ್ನು ಕನ್ನಡಿಸಲು ತೊಡಗಿದೆನು. ಈಗ ಇದನ್ನು ಸಹೃದಯರಾದ ವಾಚಕರ ಮುಂದಿಡುವೆನು. ಹಳಗನ್ನಡದ ಸೊಬಗು ನನ್ನ ಮೆಚ್ಚುಗೆಗೆ ಪಾತ್ರವಾದುದರಿಂದ ಪದ್ಯಗಳನ್ನೆಲ್ಲ ಅದರಲ್ಲಿ ಬರೆದಿರುವೆನು. ಗದ್ಯಭಾಗವನ್ನೂ ಸ್ವಲ್ಪ ಮಿಶ್ರಭಾಷೆಯಲ್ಲಿ ಬರೆದೆನು. ಇದೊಂದು ನನ್ನ ಹೊಸದಾರಿಯಾಗಲೆಂದು ಹವಣಿಸುವೆನು. ಗ್ರಂಥದಲ್ಲಿ ಅಚ್ಚಗನ್ನಡವನ್ನುಪಯೋಗಿಸಿ ಅದನ್ನು ಜನತೆಯಲ್ಲಿ ಪ್ರಚಾರಮಾಡುವುದು ಬರೆಹಗಾರನ ಹೆಗ್ಗುರಿಗಳಲ್ಲೊಂದಾಗಿರಬೇಕು. ಹೇಗಾದರೂ ಇಂಗಿತವನ್ನಿತರರಿಗರುಹಿದರೆ ಸಾಕೆಂಬುದನ್ನು ನಾನು ನಂಬುವುದಿಲ್ಲ. ಈ ನಾಟಕದಲ್ಲಿ ಕೆಲವೆಡೆಗಳಲ್ಲಿ ಕ್ಲಿಷ್ಟಪದಗಳಿದ್ದರೂ ಇರಬಹುದು; ಪ್ರಸಾದಮಾಧುರ್ಯಾದಿ ಗುಣಗಳಿಲ್ಲದೆಯೂ ಇರಬಹುದು. ನಡೆವವನಿಗೆ ತೊಡಕುಗಳು ಬರುವುವಷ್ಟೆ. ಪದ್ಯಗಳಲ್ಲಿರುವ ಶಿಥಿಲದ್ವಿತ್ವವನ್ನು ಸೂಚಿಸುವ ಚಿಹ್ನೆಗಳನ್ನಿಡಲು ಮುದ್ರಣದಲ್ಲಿ ಸಾಧ್ಯವಾಗಲಿಲ್ಲ. ನನ್ನೀ ಕೃತಿಯು ನೆರವಿಂದ ಕನ್ನಡಿಗರು ಶಕ್ತಿಭದ್ರ ಮಹಾಕವಿಯ ಜಾಣ್ಮೆಯನ್ನೂ, ಕಥಾನಾಯಕನ ಹೆಮ್ಮೆಯನ್ನೂ, ಸೀತೆಯ ಪಾತಿವ್ರತ್ಯಮಹಿಮೆಯನ್ನೂ, ಲಕ್ಷ್ಮಣನ ಭ್ರಾತೃಸೇವಾತತ್ಪರತ್ವವನ್ನೂ ಸ್ವಲ್ಪವಾದರೂ ಅರಿಯಲು ಸಮರ್ಥರಾದರೆ ನನ್ನ ಪ್ರಯತ್ನವು ಸಫಲವಾದಂತಾಗುವುದು.

ಶಕ್ತಿಭದ್ರನು ದಕ್ಷಿಣ (ಕೇರಳ) ದೇಶದವನೆಂದು ನಾಟಕದ ಸ್ಥಾಪನೆಯಿಂದ ತಿಳಿದುಬರುವುದು—(ಪುಟ ೨ 'ತೆಂಕಣನಾಡಿಂದ ಬಂದ....).

ಶ್ರೀಮಾನ್ ಎ. ಕೃಷ್ಣ ಪಿಶಾರಟಿಯವರ ಹೇಳಿಕೆಯಂತೆ ಇವನು ತಿರುವಾಂಕೂರಿನ ಚೆಂಗನ್ನೂರು ಗ್ರಾಮವಾಸಿಯಾದ ಬ್ರಾಹ್ಮಣನೆಂದು ತಿಳಿದುಬರುವುದು. ಕೇರಳ ದೇಶದಲ್ಲಿ ಇವರಿಂದ ಮೊದಲು ನಾಟಕ ಗ್ರಂಥವು ಹುಟ್ಟಿರಲಿಲ್ಲವೆಂಬುದು ನಟಿಯ ಮಾತಿನಿಂದ ಸ್ಪಷ್ಟವಾಗುವುದು. ಕೇರಳದ ಅರಸನಾದ (ಕ್ರಿ. ಶ. ೯೩೫—೯೫೫) ಕುಲಶೇಖರ ವರ್ಮನು ಕೇರಳದ ರಂಗಭೂಮಿಯಲ್ಲಿ ಸುಧಾರಣೆಯನ್ನುಂಟುಮಾಡಿದನೆಂದೂ, ಸಂಸ್ಕೃತ ನಾಟಕಗಳನ್ನು ಅದಕ್ಕೆ ತಕ್ಕಂತೆ ಮಾರ್ಪಡಿಸಿದನೆಂದೂ ಪ್ರಸಿದ್ಧಿಯುಂಟು. ಇವನು 'ತಪತೀಸಂವರಣ' ಮತ್ತು 'ಸುಭದ್ರಾ ಧನಂಜಯ' ವೆಂಬೆರಡು ನಾಟಕಗಳನ್ನು ಬರೆದಿರುವನು. ಶಕ್ತಿಭದ್ರನು ಇವನಿಂದ ಮೊದಲಿನವನಲ್ಲದಿದ್ದರೆ 'ಇದು ಅಸಂಬದ್ಧವಲ್ಲವೆ? ನಾಟಕ ಗ್ರಂಥವು ತೆಂಕಣ ನಾಡಿಂದ ಬಂದರೆ....' ಎಂಬ ನಟಿಯ ಮಾತೆ ಅಸಂಬದ್ಧವಾಗುವುದು. ಈ ಕವಿಯು ಶ್ರೀ ಶಂಕರಾಚಾರ್ಯರ ಶಿಷ್ಯನಾಗಿದ್ದನೆಂದೂ, ಆಶ್ಚರ್ಯ ಚೂಡಾಮಣಿ ಗ್ರಂಥವು ಅಕಸ್ಮಾತ್ತಾಗಿ ಸುಟ್ಟುಹೋಗಲು ಶ್ರೀಮದಾಚಾರ್ಯರು ತಮ್ಮ ಅದ್ಭುತ ಸ್ಮರಣಶಕ್ತಿಯಿಂದದನ್ನೆಲ್ಲ ಹೇಳಿದರೆಂದೂ ಕೇರಳದೈತಿಹ್ಯವೊಂದು ನುಡಿವುದು. ಮೇಗಣೆರಡು ಸಂಗತಿಗಳನ್ನು ಸೇರಿಸಿದರೆ ಕವಿಯು ಕ್ರಿ. ಶ. ಎಂಟನೆಯ ಶತಮಾನದ ಕೊನೆಯಲ್ಲಾಗಲಿ, ಒಂಬತ್ತನೆಯ ಶತಮಾನದ ಆದಿಯಲ್ಲಾಗಲಿ ಇದ್ದನೆಂದು ನಿರ್ಣಯಿಸಬಹುದು. ಇವನು ಕೇರಳದಲ್ಲಿ ಪ್ರಸಿದ್ಧಿವಡೆದ ಕವಿಯು. ಇವನ ನಾಟಕವು ಅಲ್ಲಿಯ ಆಟಗಾರರಾದ ಚಾಕ್ಯಾರರಿಗೆ ಬಹಳ ಇಷ್ಟವಾದ ವಸ್ತುವಂತೆ. ಈ ಕವಿಯು 'ಉನ್ಮಾದವಾಸವದತ್ತೆ' ಮೊದಲಾದ ಹಲವು ಸಂಸ್ಕೃತ ಗ್ರಂಥಗಳನ್ನು ರಚಿಸಿರುವನೆಂದು ತಿಳಿದುಬರುತ್ತದೆ. ಇದೇ ಭಾಸನದೆಂದು ಈಗ ವಿದಿತವಾಗಿರುವ "ಪ್ರತಿಜ್ಞಾಯೌಗಂಧರಾಯಣ" ನಾಟಕವಿದ್ದರೂ ಇರಬಹುದೆಂದು ನನ್ನ ಆಚಾರ್ಯವರ್ಯರಾದ ಮಹಾಮಹೋಪಾಧ್ಯಾಯ ಪ್ರೊ. ಎಸ್. ಕುಪ್ಪುಸ್ವಾಮಿ ಶಾಸ್ತ್ರಿಗಳವರು ಅಭಿಪ್ರಾಯವಿತ್ತಿರುವರು. * ಭಾಸನಾಟಕಚಕ್ರವೆಂದು ಹೆಸರುಪಡೆದ ೧೩ ನಾಟಕಗಳಲ್ಲಿ ಹಲವನ್ನು ಶಕ್ತಿಭದ್ರನೇ ಬರೆದಿದ್ದರೂ ಇರಬಹುದೆಂದು ಶ್ರೀಪಿಶಾರಟಿ ಮೊದ

---

***ಬಾಲಮನೋರಮಾ ಮುದ್ರಣಾಲಯದವರು ಪ್ರಕಟಿಸಿದ ಆಶ್ಚರ್ಯ ಚೂಡಾಮಣಿ ನಾಟಕದ ಮುನ್ನುಡಿಯನ್ನು ನೋಡಿರಿ.**

ಲಾದ ವಿದ್ವಾಂಸರ ಅಭಿಮತವು. ಇದು ಯುಕ್ತಿಬಾಹಿರವಲ್ಲ; ಏಕೆಂದರೆ ಆಶ್ಚರ್ಯ ಚೂಡಾಮಣಿಗೂ ಆ ನಾಟಕಗಳಿಗೂ ಹಲವು ಸಮಾನಧರ್ಮಗಳು ಕಂಡುಬರುವುವು.

ಪ್ರೊ. ಶಾಸ್ತ್ರಿಗಳ ಅಭಿಪ್ರಾಯದಂತೆ ಈ ಕವಿಯು ಕಾಲಿದಾಸನನ್ನೂ, ಭಟ್ಟನಾರಾಯಣನನ್ನೂ ಕೆಲವೆಡೆಗಳಲ್ಲಿ ಅನುಕರಿಸುವನು. ಪ್ರೇಗ್ ವಿಶ್ವವಿದ್ಯಾಲಯದ ಸಂಸ್ಕೃತಾಚಾರ್ಯರಾದ ಪ್ರೊ. ವಿಂಟರ್ನಿಟ್ಸರು ಹೀಗೆ ಅಭಿಪ್ರಾಯವನ್ನು ಕೊಟ್ಟಿರುವರು—"ಭವಭೂತಿಯ ಉತ್ತರರಾಮಚರಿತ್ರೆಯನ್ನು ಬಿಟ್ಟರೆ ಆಶ್ಚರ್ಯ ಚೂಡಾಮಣಿಯು ರಾಮನಾಟಕಗಳಲ್ಲಿ ಶ್ರೇಷ್ಠವೆಂದು ಹೇಳಬೇಕೆಂಬ ಮಹಾಮಹೋಪಾಧ್ಯಾಯರ ಅಭಿಪ್ರಾಯವು ಸರ್ವಸಮ್ಮತವು. ಸಂಸ್ಕೃತ ಕಾವ್ಯಶೈಲಿಯ ಸಾರ್ವಭೌಮನಾದ ಭವಭೂತಿಯು ಶಕ್ತಿಭದ್ರನಿಂದ ಉತ್ತಮ ಕವಿಯು; ಆದರೆ ನಾಟಕೀಯವಸ್ತು ಅಭಿನಯಾರ್ಹತೆಗಳನ್ನು ನೋಡಿದರೆ ಶಕ್ತಿಭದ್ರನ ನಾಟಕವು ಉತ್ತರ ರಾಮಚರಿತವನ್ನೂ ಮೀರುವುದು." *

ಈ ನಾಟಕದಲ್ಲಿ ಕವಿಯು ಚಮತ್ಕೃತಿಜನಕವಾದ ಪ್ರತಿಭೆಯನ್ನು ತೋರಿರುವನು. ಇದರಲ್ಲಿ ಹಲವು ಅದ್ಭುತಸನ್ನಿವೇಶಗಳನ್ನು ಅಥವಾ ಆಶ್ಚರ್ಯ ಚೂಡಾಮಣಿಯನ್ನೂ ಅದ್ಭುತಾಂಗುಳೀಯಕವನ್ನೂ ಚಿತ್ರಿಸಿದುದರಿಂದ ಈ ಹೆಸರಿದಕ್ಕೆ ಚೆನ್ನಾಗಿ ಸಲ್ಲುವುದು. ಮೊದಲನೆಯಂಕದಲ್ಲಿ (ಪುಟ ೩ ಶ್ಲೋ-೬) ಶೂರ್ಪಣಖೆಯ ಸುಂದರಾಕೃತಿಯಿಂದ ಅದ್ಭುತರಸವು ಮೊಳಕೆಯಾಗುವುದು. ದ್ವಿತೀಯಾಂಕದಲ್ಲಿ ರಾಮನು ಸೀತೆಯ ಅನ್ಯಾದೃಶ ಸೌಂದರ್ಯವನ್ನು ನೋಡಿ (ಪುಟ ೧೪-೪) ಆಶ್ಚರ್ಯಗೊಳ್ಳುವುದರಿಂದ ಅದು ಚಿಗುರುವುದು. ಮೂರನೆಯಂಕದಲ್ಲಿ ಲಕ್ಷ್ಮಣನು ತಂದ ಆಶ್ಚರ್ಯ ಚೂಡಾಮಣಿಯನ್ನೂ ಅದ್ಭುತಾಂಗುಳೀಯಕವನ್ನೂ (ಪು. ೨೬-೧೦) ವಿಚಿತ್ರವಾದ ಕನಕಮೃಗವನ್ನೂ (ಪು. ೨೬-೧೧) ನೋಡಿ ಸೀತಾರಾಮರು ವಿಸ್ಮಿತರಾಗುವರು. ಅದರಿಂದ ಅದ್ಭುತ ರಸವು ಸರ್ವಾಂಗ ಪರಿಪೋಷವನ್ನೆಯ್ದುವುದು. ನಾಲ್ಕನೆಯಂಕದಲ್ಲಿ ಚೂಡಾಮಣಿಯ ಮಹಿಮೆಯಿಂದ ಸೀತೆಯು ರಾವಣನ ಮಾಯೆಯನ್ನರಿತು ವಿಸ್ಮಯಪಡುವಳು. ಐದನೆ

* ಕುಪ್ಪುಸ್ವಾಮಿ ಶಾಸ್ತ್ರಿ ಕಮ್ಮೆಮೊರೇಶನ್ ಗ್ರಂಥ, ಪುಟ ೩

ಯಂಕದಲ್ಲಿ ರಾವಣನ ವಿಪ್ರಲಂಭಾಭಾಸವೂ, ಸೀತೆಯ ಉದಾತ್ತವಿಪ್ರಲಂಭವೂ, ಮಂಡೋದರಿಯ ಆಶ್ಚರ್ಯೋಕ್ತಿಯೂ ( ಪು. ೫೯, ಈಕೆ ಬಹು ಧೀರೆ.... ) ಈ ರಸವನ್ನು ಮುಂದುವರಿಸುವುವು. ಆರನೆಯಂಕದಲ್ಲಿ ಧೃತಿ, ದೃಷ್ಟಿ, ಮತಿ, ದಾಕ್ಷ್ಯಗಳಿಂದ ಕೂಡಿದ, ಅದ್ಭುತ ಕಾರ್ಯದಕ್ಷನಾದ ಹನುಮಂತನು ಅದ್ಭುತಾಂಗುಳೀಯಕವನ್ನು ಸೀತೆಗಿತ್ತು ಅವಳಲ್ಲಿಂದ ಆಶ್ಚರ್ಯ ಚೂಡಾಮಣಿಯನ್ನೂ ಸಂದೇಶವನ್ನೂ ತೆಗೆದೊಯ್ಯುವನು. ಕೊನೆಯಂಕದಲ್ಲಿ ಸರ್ವಾಶ್ಚರ್ಯಗಳ ಶಿರೋರತ್ನವಾದ ಸೀತೆಯ ಜಾತವೇದೋವಿಶುದ್ಧಿಯು ಕಾಣುವುದು. ಇಲ್ಲಿ ನಾರದನೊಡನೆ ಸರ್ವದೇವತೆಗಳೂ ಪಿತೃಗಳೂ ಪ್ರತ್ಯಕ್ಷರಾಗುವರು. ಇಂತೀ ನಾಟಕದಲ್ಲಿ ಚಲಚ್ಚಿತ್ರದ ಚಿತ್ರಗಳಂತೆ ದೃಶ್ಯಗಳು ಒಂದರ ಮೇಲೊಂದು ಕಣ್ಣಿನೆದುರಲ್ಲಿ ಸರಿದು ಪ್ರೇಕ್ಷಕರ ಹೃದಯವನ್ನು ತಲ್ಲೀನವನ್ನಾಗಿ ಮಾಡುವುವು. ಇದರ ಹೆಸರು ಸರ್ವಥಾ ಸಾರ್ಥಕವೆಂದು ಬೇರೆ ಹೇಳಬೇಕೆ? ಇದರಲ್ಲಿ ಹಲವು ಲೋಕೋಕ್ತಿಗಳೂ ಮಧುರ ವಚನವಿನ್ಯಾಸಗಳೂ ಕಂಡುಬರುವುವು—' ಸಮಾಧಿ ಸ್ತ್ರೀಯರ ವಿಷಯದಲ್ಲಿ ಲೋಕವನ್ನರಿಯದು' (ಪುಟ ೪) ' ಕಾದಲ್ಕೆ ಗುಣದೋಷಗಳನ್ನು ಬೇರ್ಪಡಿಸಲಾರ್ಪುದೆ ? ' ( ಪು. ೬ ) ' ಸೇವ್ಯಂ ಗುಣಮೆ ಜನರ್ಗೆ.... ' ( ಪು. ೨ ) ಎಂಬ ನುಡಿಯು ಎಷ್ಟು ಮನೋರಂಜಕವಾಗಿರುವುದೆಂದು ವಾಚಕರು ತಿಳಿಯಬಹುದು.

ಈ ನಾಟಕವನ್ನು ಅಚ್ಚುಹಾಕಿಸಲು ಒಳ್ಳೆಯ ಕಾಗದವನ್ನೊದಗಿಸಿ ಕೊಟ್ಟು ಮಹೋಪಕಾರವನ್ನೆಸಗಿದ ಮೈಸೂರು ಪೇಪರ್ ಮಿಲ್ಸಿನ ಅಧ್ಯಕ್ಷ ಮಹಾನುಭಾವರಿಗೆ ನಾನು ಚಿರಋಣಿಯಾಗಿರುವೆನು. ಇದನ್ನು ಕಾಲಕ್ಕೆ ಸರಿಯಾಗಿ ಅಂದವಾಗಿ ಮುದ್ರಿಸಿಕೊಟ್ಟ ದೇಶಬಂಧು ಮುದ್ರಣಾಲಯದಧಿಕಾರಿಗಳಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಯನ್ನರ್ಪಿಸುವೆನು. ಇದನ್ನು ಪ್ರಕಾಶಗೊಳಿಸಲು ಪ್ರೋತ್ಸಾಹವನ್ನೂ ಸರ್ವವಿಧದ ನೆರವನ್ನೂ ಇತ್ತ ನನ್ನ ಮಿತ್ರವರೇಣ್ಯರಾದ ಶ್ರೀಮಾನ್ ಪಾಂಡೇಶ್ವರ ಸುಬ್ಬರಾಯರಿಗೆ ಅನಂತ ವಂದನೆಗಳನ್ನು ಸಮರ್ಪಿಸುವೆನು.

೨೮, ಈಸ್ಟ್ ರೋಡ್,
ಬಸವನಗುಡಿ,
೧೭ ಸಪ್ಟಂಬರ ೧೯೪೩

ಇಂತು,
ಕನ್ನಡಗಬ್ಬಿಗರ ನೇಹವನ್ನು ಬಯಸುವ
ಎಂ. ರಾಮಕೃಷ್ಣ ಭಟ್ಟ.

ಶ್ರೀ:

# ಶಕ್ತಿಭದ್ರಮಹಾಕವಿಯ

# ಆಶ್ಚರ್ಯಚೂಡಾಮಣಿ

## ಒಂದನೆಯಂಕ

ನಾಂದಿಯ ಕೊನೆಯಲ್ಲಿ

( ಸೂತ್ರಧಾರನು ಪ್ರವೇಶಿಸುವನು )

ಸೂತ್ರಧಾರ—

ಶ್ರೀಮನ್ನೀಲಭುಜಂಗಳಿಂ ತೆರೆಗಳಂ ಮುಕ್ತಾವಳೀಜಾಳದು
ದ್ದಾಮಾಕಾರದ ಫೇನರಾಶಿಯನನಂತಾಹೀಶರತ್ನಪ್ರಭಾ।
ಸ್ತೋಮೋನ್ಮೇಷದೆ ಕೆಂಕಮಂ ಪುರುಳ್ಗಳಂ ಪೆರ್ಜೋತಿಯಂಸಂಕುವಂ
ಶ್ಯಾಮಂ ತಾಳ್ದಿ ಸಮುದ್ರದೊಳ್ಪೊರೆಗೆ ಪಟ್ಟಂ ನಿಮ್ಮನಲ್ಪಾಬ್ಧಿವೋಲ್ ॥

( ಅತ್ತಿತ್ತ ನಡೆದು ನೇಪಥ್ಯದತ್ತನೋಡಿ ) ಆರ್ಯೆ, ಇತ್ತ ಬಾ.

( ರಂಗಂಬೊಕ್ಕು )

ನಟಿ—ಆರ್ಯನೆ, ಇದೊ ಬಂದಿರುವೆನು.

ಸೂತ್ರ—ಪ್ರಿಯೆ,

ಜನರಂಜನಮನ್ಯರ ನೆರ
ವಿನ ಬಲದಿಂ ಸಾಧ್ಯಮಂತೆ ಭರತಾದಿಗಳಿಂ।
ತನಿವೆರ್ಚಿದ ಪೆರ್ವಿಣ್ಪಂ
ಜನನಾಥಂಬೊಲ್ಗುರೂಪದೇಶದೆ ಪೊತ್ತಿಂ ॥ ೨ ॥

ನಟಿ—ಆರ್ಯನ ಮೊಗವಣ್ಣವೆ ಕಾರ್ಯಗೌರವವನ್ನು ಸೂಚಿಸುವುದು.

ಸೂತ್ರ—ಸತ್ಯ. ಸುಂದರಿ, ಅಸಾಮಾನ್ಯಮಾರ್ಗವು ಹಲವರಿಗೆ ದುರ್ಗಮವಷ್ಟೆ.

ನಟಿ—ಆರ್ಯ, ಅದೆಂತು ಅಸಾಮಾನ್ಯವೆಂದು ಹೇಳುವೆ ?

**ಸೂತ್ರ**—ಪ್ರಿಯೆ 'ತೆಂಕಣ ನಾಡಿಂದ ಬಂದ ಆಶ್ಚರ್ಯಚೂಡಾಮಣಿಯೆಂಬ ಕನ್ನಡನಾಟಕದ ಸೊಬಗನ್ನು ಅಭಿನಯದಿಂದ ಸವಿಯಲು ಬಯಸುವೆವೆ'ಂದು ಮಹಾನುಭಾವರಾಣತಿಯಿತ್ತಿರುವರು.

**ನಟಿ**—ಆರ್ಯ, ಇದು ಅಸಂಬದ್ಧವಲ್ಲವೆ? ನಾಟಕಗ್ರಂಥವು ತೆಂಕಣ ನಾಡಿಂದ ಬಂದರೆ ಆಗಸದಲ್ಲಿ ಹೂವುಂಟಾಗುವುದು; ಮಳಲಿಂದೆಣ್ಣೆ ಬರುವುದು.

**ಸೂತ್ರ**—ಪ್ರಿಯೆ, ಹಾಗೆನ್ನಬೇಡ. ಗುಣವನ್ನು ಕೆಯ್ಕೊಳ್ಳು; ಹುಟ್ಟೂರಿನ ಮೇಗಣ ಅತ್ಯಾಶೆಯನ್ನು ಬಿಡು. ನೋಡು—

ಸೇವ್ಯಂ ಗುಣಮೆ ಜನರ್ಗೆ ದಿ
ಶಾವ್ಯತ್ಯಯಮಲ್ತಿದರ್ಕದಾಹೃತಿ ನಿನ್ನಾ।
ನವ್ಯಮೆನಿಪ ಬಾವನ್ನಂ
ಭವ್ಯಸ್ತನದೊಳ್ಸುಧಾಂಶುಗೌರಂ ಹಾರಂ ॥ ೩ ॥

**ನಟಿ**—(ತನ್ನ ಮೆಯ್ಯನ್ನು ನೋಡಿ) ನಿನ್ನ ಮಾತು ಯುಕ್ತವು. ಆ ನಾಡು ರತ್ನಾಕರವೆ. ಪ್ರಿಯನೆ, ನಾಟಕದ ಹೆಸರಿಂದ ತನ್ನ ಪ್ರಜ್ಞಾವಿಲಾಸವನ್ನು ಬೇರೂರಿಗೆ ಕಳುಹಲೆಳಸುವ ಕಬ್ಬಿಗನವನಾರು? ಇದನ್ನು ಕನ್ನಡಿಗರ ಹಬ್ಬದುಣಿಸನ್ನಾಗಿ ಮಾಡಿದ ಕನ್ನಡಗಬ್ಬಿಗನಾರು?

**ಸೂತ್ರ**—ಪ್ರಿಯೆ, ಕೇಳು:—ಈ ನಾಟಕವು 'ಉನ್ಮಾದವಾಸವದತ್ತೆ' ಮೊದಲಾದ ಕಬ್ಬಗಳನ್ನು ಸಂಸ್ಕೃತದಲ್ಲಿ ಬರೆದ ಶಕ್ತಿಭದ್ರಮಹಾಕವಿಯ ಹೆಬ್ಬಗೆಯ ಸುಗ್ಗಿ. ಇದನ್ನು ಪೌರಸ್ತ್ಯಪಾಶ್ಚಾತ್ಯವಿದ್ಯಾಸಂಪನ್ನರೂ ಸಂಸ್ಕೃತಾಚಾರ್ಯರೂ ಆದ ಶ್ರೀ ರಾಮಕೃಷ್ಣಭಟ್ಟರು ಈಗಳೆ ಕನ್ನಡ ನಾಡೆಲ್ಲ ಕೊಂಡುಕೊನೆವಂತೆ ಕನ್ನಡಿಸಿದರು. ಅದರಿಂದ ನೀನೂ ಉಚಿತ ಪಾತ್ರದಲ್ಲಿ ಸಾಲ್ವಂತು ಗಮನವನ್ನಿಡು. ನಾನೂ ಮಹಾನುಭಾವರನ್ನಿಂತು ಬಿನ್ನವಿಸುವೆನು........ಓಹೋ! ಏನಿದು? ನಾನು ಬಿನ್ನವಿಸುವುದಕ್ಕೆ ತೊಡಗಲು ಏನೋ ದನಿ ಕೇಳಿಸುತ್ತಿದೆ. ಏನೆಂದು ನೋಡುವೆನು.

(ನೇಪಥ್ಯದಲ್ಲಿ ಬಿಲ್ವೆದೆಯ ದನಿಯಾಗುವುದು)

ಸೂತ್ರ—ಇರಲಿ ; ಅರಿತೆನು.

ಇನಿಯಳೊಡನಿರ್ಪ ರಾಮಂ
ಗನುಜಂ ಸೌಮಿತ್ರಿ ಪೇರಡವಿಯೊಳ್ಸಮೆದಂ।
ಮನೆಯುಂ ಪಚ್ಚೆಲೆಯಿಂದಂ
ಬನಮಿಗಮುಂ ಜ್ಯಾನಿನಾದದಿಂದೋಡಿಸುಗುಂ ॥

( ಹೋಗುವರು )

---

॥ ಸ್ಥಾಪನೆ ॥

( ಬಿಲ್ಗಣೆಗಳನ್ನು ಹಿಡಿದುಕೊಂಡು ಲಕ್ಷ್ಮಣನು ಪ್ರವೇಶಿಸುವನು )

ಲಕ್ಷ್ಮಣ—

ಜ್ಯಾಘೋಷಂಗಳಿನೋಡಿಪೆಂ ತಗುಳಿವರ್ಪಾರ್ಪೆಯ್ನ ಸಿಂಹಾದಿ ಭೀ
ದೌಘಶ್ವಾಪದವೃಂದಮಂ ಸದನಮಂ ಪರ್ಣಂಗಳಿಂ ತೀರ್ಚುವೆಂ।
ವಾಘೋದ್ಯತ್ಸುಮದಿಂದೆ ಪಳ್ಕೆಯುಮನಾಂ ಪೆರ್ವೆತ್ತ್ರದಿಂ ಪೀಠಮಂ
ಕ್ಷ್ಮಾಘಾತೀತ ವಿಭಾಗಮಂ ತಳಿವೆನೊಳ್ನೀರಿಂದೆ ನಲ್ವಾಂಗಿನಿಂ ॥ ೫ ॥

(ಅಂತೆಗೆಯ್ದು) ಎಂತೆಂತೋ ಅಣ್ಣನಾಣತಿಯನ್ನು ಪೂರಯ್ಸಿದೆನು. ಅಃ ವಿಪನ್ನರವಸ್ಥೆ ಮೇಧಾವಿನಿಯಲ್ತೆ! ಈಗ ನಾನು ಸಿದ್ಧಗೊಳಿಸಿದ ಎಲೆ ಮನೆಯನ್ನು ಗೋದಾವರೀತಟದೊಂದೆಡೆಯಲ್ಲಿ ಅತ್ತಿಗೆಯೊಡನೆ ದಾರಿನಡೆ ಯಿಂದೊದವಿದ ಬಳಲಿಕೆಯನ್ನು ತರಂಗಮಾರುತದಿಂದ ಕಳೆಯುತ್ತಿರುವ ಅಣ್ಣನಿಗೆ ಬಿನ್ನವಿಸುವೆನು.

( ಅತ್ತಿತ್ತ ನಡೆದು ನೋಡಿ )

ಓಹೋ! ಕಾಡಿನೊಳಗಸಂಭಾವ್ಯವಾದುದೀ ರೂಪು; ಏಕೆಂದರೆ

ನಾಕಂ ಮೇಣ್ತ್ತಿರೆ ಪೆತ್ತುದೊ
ಈ ಕುಡುವುರ್ವುಗಳಸಮೊಲೆನಿಡುಗಣ್ಪೆಡಗಿಂ।
ಬಾಕುಳಿಯಿಂದೆಸೆವಚ್ಚರಿ
ಯಾಕರಮಂ ಚೆಲ್ವುವೆತ್ತ ಪೊಂಪುಳಿವಣಿಯಂ ॥ ೬ ॥

(ಮನೋವಿಕಾರವನ್ನು ತೋರಿ)

ಏನಿದು? ನಾನು ಶ್ರೀರಾಮಚಂದ್ರನ ತಮ್ಮನಾದ ಲಕ್ಷ್ಮಣನಲ್ಲವೆ?

ಇವಳ್ಬೊಲೋಕಸ್ಥಾನಮನೊ ಬರ್ದಿಲಾಣ್ಮರನೊ ಕರಂ
ನಿವಾಸಕ್ಕಾಧಾರಾವನಿಯನೊಸೆದಾರಯ್ದು ತಗುಳ್ಗಿ।
ನ್ನ ವಾಮಾಂತವ್ಯಾಪಾರಮುದುಡಿಗೆ ಸಲ್ಗುಂ ಕುಮತಿಗಾಂ
ಹವಿಸ್ಸೆಂತಪ್ಪೆಂ ಕಂತುಗೆ ವಶಿಯೆನೆಮ್ಮಣ್ಣನಣುಗಂ ॥ ೭ ॥

(ಆಮೇಲೆ ಮನೋಹರವೇಷವನ್ನು ತಾಳಿ ಶೂರ್ಪಣಖಿ ಬರುವಳು)

ಶೂರ್ಪ - (ಲಕ್ಷ್ಮಣನನ್ನು ಕಂಡು) ಹಂ, ಇವನೂ ಅವನೆ.

(ನಾಣನ್ನು ತೋರುವಳು)

ಲಕ್ಷ್ಮ—ಈಕೆಯಾಚರಣೆ ವಿರುದ್ಧವಾಗಿರುವುದು; ಏಕೆಂದರೆ

ತವಸಿಯೆನಾಂ ಬಿರುಗಣ್ಣಿಂ
ದವಲೋಕಿಸೆಯುಂ ಮನೋಜದಯಿತೆವೊಲೀ ಪೆ।
ಣ್ಣವೆ ನಾಣ್ಚುತೆ ಪೂವುಡಿಯಿಂ
ದೆ ವಿಚಳಿಪನ್ನಂ ದ್ವಿರೇಫಮಾಸ್ಯಮನೀಳ್ಗುಂ ॥ ೮ ॥

ಶೂರ್ಪ—(ಸ್ವಗತ) ಇವನೂ ಏನನ್ನು ಹೇಳುವನೊ! ಇರಲಿ; ಹೀಗೆ ನುಡಿವೆನು. (ಪ್ರಕಾಶ) ಆರ್ಯ, ಇತ್ತ ಬಾ.

ಲಕ್ಷ್ಮ—ಸಮಾಧಿ ಸ್ತ್ರೀಯರ ವಿಷಯದಲ್ಲಿ ಲೋಕವನ್ನರಿಯದು.

(ಸುಮ್ಮನೆ ಹೋಗುವನು)

ಶೂರ್ಪ—(ಸ್ವಲ್ಪ ಹಿಂಬಾಲಿಸಿ) ಆರ್ಯನೆ, ಶರಣು ಹೊಕ್ಕ ಹೆಣ್ಣನ್ನು ಉಪೇಕ್ಷಿಸುವುದು ನಿನಗೆ ಯುಕ್ತವಲ್ಲ.

ಲಕ್ಷ್ಮ—ಇಲ್ಲ, ಇಲ್ಲ, ನಾನು ನಿನ್ನನ್ನು ಕಡೆಗಣಿಸುವುದಿಲ್ಲ. ಈಗ ದಶಾಭೇದದಿಂದ ಶೋಚನೀಯನಾದ ಗುರುವಿನ ಕಟ್ಟಾಣತಿಯೆ ಇದಕ್ಕೆ ಕಾರಣವು.

ಶೂರ್ಪ—ಹಾಗಾದರೆ ನನ್ನ ವಿಷಯದಲ್ಲಿಯೂ ಗುರುವಿನ ಆಜ್ಞೆಯನ್ನು ನೀನು ಮಾರಲಾಗದು.

ಲಕ್ಷ್ಮ—(ಕೋಪಗೊಂಡು) ಆ: ! ನನ್ನನ್ನಾಜ್ಞಾಪಿಸುವನವನಾರು?

ಶೂರ್ಪ—(ಭಯವನ್ನು ತೋರಿ) ಆರ್ಯ, ದಯೆದೋರು; ದಯೆದೋರು. ಶ್ರೀ ರಾಮಚಂದ್ರನೆ ಆಣತಿಯನ್ನೀವನು.

ಲಕ್ಷ್ಮ—(ಸ್ವಗತ) ಹಾ! ಈಕೆ ಮೊದಲೆ ಅಣ್ಣನನ್ನು ನೋಡಿರುವಳು. ಇರಲಿ. ಸ್ವಲ್ಪಕಾಲ ಅಣ್ಣನೊಡನೆ ಮಾತಾಡಿದುದರಿಂದಿವಳನ್ನು ಸಮಾಧಾನಗೊಳಿಸುವೆನು. (ಪ್ರಕಾಶ) ಭದ್ರೆ, ಅಣ್ಣನೇನೆಂದಾಜ್ಞಾಪಿಸುವನು?

ಶೂರ್ಪ—ಆರ್ಯನು ಕೇಳಬೇಕು.

ಲಕ್ಷ್ಮ—ಮನಗೊಟ್ಟು ಕೇಳುವೆನು.

ಶೂರ್ಪ—ಆರ್ಯ, ನನ್ನೊಡನೆ ನೀನು ಅಣ್ಣನ ಸೇವೆಯನ್ನು ಮಾಡಬೇಕೆಂದು ಶ್ರೀರಾಮನಾಣತಿ.

ಲಕ್ಷ್ಮ—(ಕೆಯ್ಯನ್ನು ತಿರುಗಿಸಿ) ನೋಡು—

ಮರಗಳ್ವಲ್ಕಲಮಂತೆ ಕಂದಫಲಮೂಲಂ ದರ್ಭೆಯುಂ ನಾಂದ ಶೀ
ರ್ಷರುಹಾಶ್ಲೇಷಮಿವೆನ್ನ ಗೇಹಮುಡುಗನ್ನಂ ಸೆಜ್ಜೆಯೊಳ್ಸೀಸಕಂ।
ಹರಿಣಾಕ್ಷೀ ಪೆರತೇಂ ಮೃಗಂಬೊಲಟವೀವೃತ್ತಂಗೆ ನೀಂಭಾಜನಂ
ಕರಮಲ್ತೆತ್ತ ತಪೋಧನರ್ತಪವಗೆತ್ತಲ್ಕುರ್ವಿಲ್ಲಂ ಸಖೀ ॥ ೯ ॥

ಶೂರ್ಪ—ಇದು ಸಟೆ, ಇದು ಸಟೆ. ಆ ಮಹಾನುಭಾವನಾದರೊ ಹೆಂಡತಿಯೊಡನಿರುವನಷ್ಟೆ.

ಲಕ್ಷ್ಮ—ಹೆಣ್ಣೇ, ನಮ್ಮಣ್ಣನ ನಡೆಹವನ್ನು ಪರಮಾರ್ಥವಾಗಿ ನೀನರಿಯೆ.

ಶೂರ್ಪ—ಅದೆಂತು? ಅದೆಂತು?

ಲಕ್ಷ್ಮ—ಎಷ್ಟುರವರೆಗೆ ಆರ್ಯನು ತನ್ನ ಪ್ರತಿಜ್ಞೆಯನ್ನು ಪೂರಯ್ಸಿ ಪ್ರಕೃತಿಮಂಡಲವನ್ನೂ, ಹಿರಿಯರನ್ನೂ ಭರತನನ್ನೂ ನೋಡುವುದಿಲ್ಲವೋ, ಅಷ್ಟುರವರೆಗೆ ಒಂದೇ ನೋಂಪಿಯನ್ನಾಚರಿಸುವನು.

ಶೂರ್ಪ—ಹಾಗಾದರೆ ಇಲ್ಲಿ ಅವಳೇನನ್ನು ಮಾಡುವಳು?

ಲಕ್ಷ್ಮ—ನಾನು ಮಾಡುವುದನ್ನೆ.

ಶೂರ್ಪ—ಆಕೆ ಶ್ರೀರಾಮನನ್ನೆಂತುಪಚರಿಸುವಳೋ ಅಂತೆ ನಾನೂ ನಿನ್ನನ್ನುಪಚರಿಸುವೆನು.

ಲಕ್ಷ್ಮ—ಭದ್ರೆ, ಇದೂ ಬೇಡಲು ತಕ್ಕುದಾದ ಹುರುಳೆ? ನೋಡು—

ಜಗದೊಳ್ಬುದ್ಧಿಯುತರ್ಮ್ಮಾ
ನಿಗಳೆಲ್ಲರ್ಕೆಡೆಪಲಾವುದಂ ಮೊಗಸಿದಪರ್!
ಮೃಗಲೋಚನೆ ನೀನಾವೂ
ಳಿಗಮಂ ತಾನಾಟಿಸುತ್ತೆ ಕಿರುಕುಳಳಾದೈ ‖ ೧೦ ‖

ಶೂರ್ಪ—ಆರ್ಯ, ಕಾದಲ್ಕೆ ಗುಣದೋಷಗಳನ್ನು ಬೇರ್ಪಡಿಸಲಾರ್ಪುದೆ?

ಲಕ್ಷ್ಮ—(ಸ್ವಗತ) ಇಂತು ನುಡಿವೀ ಹೆಣ್ಣನ್ನೆಂತು ಹೋಗಲಾಡಿಸಲಿ! (ಆಲೋಚಿಸಿ) ಇರಲಿ; ಕಂಡೆನು. (ಪ್ರಕಾಶ) ಭದ್ರೆ, ಅಣ್ಣನು ಎಲೆಮನೆಯನ್ನು ಹೊಕ್ಕಬಳಿಕ ನಾನು ಬೇಕಾದೆಡೆಯಲ್ಲಿ ನಿನ್ನನ್ನು ಕಾಣುವೆನು.

ಶೂರ್ಪ—ಹಾಗಾದರೆ ನಾನಾಪರ್ಣಶಾಲೆಯ ಬಳಿಯಲ್ಲಿಯೆ ಕಾಯುತ್ತಿರುವೆನು.

ಲಕ್ಷ್ಮ—(ಸ್ವಗತ) ಆಗಲೆಂತಾದರು. ಕಾಲಕ್ಷೇಪವು ತೊಡರುಗಳನ್ನು ತಂದಲ್ಲದೆ ಬಿಡದು. (ಪ್ರಕಾಶ) ನಿನಗಿಷ್ಟವಿದ್ದಂತಾಗಲಿ.

ಶೂರ್ಪ—ಆರ್ಯನಪ್ಪಣೆ. (ಹೋಗುವಳು)

ಲಕ್ಷ್ಮ—(ವಿಚಾರಿಸುತ್ತ) ಈಕೆಯನ್ನು ಪರೀಕ್ಷಿಸುವುದೊಳ್ಳಿತು; ಏಕೆಂದರೆ—

ಬೇಡರ್ಗಸದಳವಾದೀ
ಕಾಡೆತ್ತೊ ಚ್ಚೇರಗಣ್ಣ ಪೆಣ್ಣೆವಳೆತ್ತಲ್!
ಬೀಡಂ ನಚ್ಚುವಸಾವಂ
ನೀಡುಂ ಹೇವಮಾಬ್ಜಿನೀಮರಾಳದ ಕಡಲೊಳ್ ‖ ೧೧ ‖

ಇದೆ ನನ್ನ ಮೊದಲಿನ ಬರದಾಣವು.

( ಸೀತೆಯೊಡನೆ ರಾಮನು ಬರುವನು )

ರಾಮ—ದೇವಿ, ಹೊಳಲಲ್ಲಿರುವುದರಿಂದಲೂ ಕಾಡಿನಲ್ಲಿರುವುದು ಹಿರಿದೆಂದು ನನಗೆ ಕಾಣುವುದು. ನೋಡು—

ಪೂದೊಂಗಲ್ಗಂಪಳುರ್ಕೆಡ್ಡಮರದುರುಗಲಿಂ ಗಾಡಿವೆತ್ತೀ ವನಂಗಳ್
ನಾದೋರೂದ್ಯಾನದೇಶಂ ಝುರಜಲದಮನೋಹಾರಿ ಶೈಲಂಗಳಕ್ಕುಂ
ವೋದಾಕ್ರೀಡಾದ್ರಿಯೂರ್ಮಿಪ್ಲವವಿಹಗನದಂ ಘರ್ಮ
ತೋಯಾವಗಾಹಂ
ನಾದೇಯೋರ್ವೀಸರೋಜಾಳಿಯ ಪರುಸದೆ ತಣ್ಗಮ್ಮೆಲರ್ಮಿತ್ರ
ವರ್ಯಂ ॥ ೧೨ ॥

ಸೀತೆ—ನಾಥ, ಅಯೋಧ್ಯೆಯಲ್ಲಿ ಹಿರಿಯರಷ್ಟು ಬೇಸರುಪಡದಿದ್ದರೆ ಬದುಕಿರುವಷ್ಟುಕಾಲವಿಲ್ಲಿಯೆ ವಾಸಮಾಡಲು ನನಗಾಸೆಯುಂಟು.

ಲಕ್ಷ್ಮ—( ನೋಡಿ) ಓಹೋ! ಅಣ್ಣನಿರುವನಿಲ್ಲಿ. ಅಕ್ಕಟಾ! ವಿಧಿಯ, ಅಲ್ಲ, ಅಲ್ಲ, ಕೈಕೇಯಿಯ ಮಾಟವೆಷ್ಟು ಕಠೋರವು! ತಾಯೆ ಕೈಕೇಯಿ,

ಆರ್ಯಂ ಪಟ್ಟೆಯನುಟ್ಟುದಂ ಬಿಸುಟರಂ ಕೆಯ್ಕೊಂಡನೀ ಚೀರಮಂ
ದುರ್ಯಾಣಾಟವಿಯೊಳ್ಮೃಗೇಂದ್ರಪಥದೊಳ್ವೈದೇಹಿ ಕಾಲಿತ್ತಪಳ್।
ಕಾರ್ಯೋತ್ಕಂ ಭರತಂ ಪೊಲಂಬುಗಿಡುಗುಂ ದುರ್ಮಾನದಿಂ ಕೋಸಲಂ
ವೀರ್ಯಾತೀತಮುದಿಂತು ರಾಜನಳಿದಂ ನಿನ್ನಾರ್ಪು ಸರ್ವಂಕಷಂ ॥
॥ ೧೩ ॥

ಅಣ್ಣನ ಬಳಿಗೀಗ ಹೋಗುವೆನು. ( ಹತ್ತಿರ ಬಂದು) ಆರ್ಯನಿಗೆ ಜಯವಾಗಲಿ.

ರಾಮ—ಲಕ್ಷ್ಮಣಾ, ನಿನ್ನ ಕಾರ್ಯವು ಕೊನೆಗಂಡಿತೆ?

ಲಕ್ಷ್ಮ—ಆರ್ಯ, ಹೌದು.

ರಾಮ - ಹಾಗಾದರೆ ನನ್ನನ್ನಲ್ಲಿಗೆ ಕರೆದೊಯ್ಯು.

ಲಕ್ಷ್ಮ - ಅಣ್ಣನಪ್ಪಣೆ. ಇತ್ತ ಬನ್ನಿರಿ.

( ಎಲ್ಲರೂ ನಡೆವರು )

ರಾಮ—( ಲಕ್ಷ್ಮಣನ ಮೊಗಬಣ್ಣವನ್ನು ಕಂಡು ) ಮಗೂ ಲಕ್ಷ್ಮಣಾ,

ಮೋಕ್ಷಾಪೇಕ್ಷಿಮುನೀಂದ್ರವೃಂದಕೆ ತುಳಿಲ್ಗೆಯ್ದಲ್ಲ ಪುಣ್ಯಾಪಗಾ
ಸುಕ್ಷೇತ್ರಂಗಳನೋತು ಕಂಡು ವನದೊಳ್ಸಯ್ಪಂ ಮನಶ್ಶಾಂತಿಯಂ।
ಚಕ್ಷುರ್ಗೋಚರಮೆಂಬಿನಂ ತಳೆದುದರ್ಕಾಮಲ್ತೆ ಕೈಕೇಯಿಯೇ
ಸ್ವಕ್ಷತ್ರೋಚಿತವಾನಧರ್ಮಕೆ ನಿದಾನಂ ವ್ಯಾಜದಿಂದೊಳ್ಪಿದಳ್
॥ ೧೪ ॥

ಲಕ್ಷ್ಮ—'ಗುಣವಂತರಿಗೆ ದೋಷಗಳೆಂದಿಲ್ಲ' ವೆಂಬೀ ನಾಣ್ನುಡಿ ಹುಸಿಯಲ್ಲ.

ರಾಮ—ಲಕ್ಷ್ಮಣ, ಇನ್ನೂ ತಾಯಮೇಗಣ ನಿನ್ನ ಕೋಪವು ತಣಿದಿಲ್ಲವೇ ?

ಲಕ್ಷ್ಮ—ಅಣ್ಣಾ,

ಪದೆಪಿಂ ತಾಯ್ವಿರ ಕಣ್ಮಲರ್ಬಿರಿಯೆ ಮೇಣ್ಪಾಲ್ಸೂಸೆ ವಕ್ಷೋಜದೊ
ಳ್ಪೊದಳ್ದಾಣ್ಮಂ ತಲೆಯೊಳ್ಪವಿತ್ರಜಲಮಂ ನಿನ್ನಶ್ರುವಿಂ ಕೂಡಿಸಂ।
ಮದದಿಂ ತಾನೆರೆವನ್ನೆಗಂ ತರುಬಿದಳ್ದುರ್ಮಂತ್ರದಿಂದಾವಳಾ
ಪದನಂ ಪುಚ್ಚಳಿಯಳ್ನಿಶಾಚರಿಯುವಳ್ಪೇಳೆಂತು ತಾಯಕ್ಕುಗುಂ ॥೧೫॥

ರಾಮ - ( ಕಿವಿಗಳನ್ನು ಮುಚ್ಚಿ ) ಶಿವಶಿವಾ ! ಅಂತಹ ಪಾಪಭಾವನೆ ನಿನ್ನ ಬಗೆಯಿಂದ ದೂರ ಸಾರಲಿ.

ಪುರುಳಿಲಿ ಕಿರುಕುಳವೆಂದುಂ
ಪರಿಗುಂದಿದ ದುಷ್ಟರಾಜ್ಯದಲ್ಲಳ್ಕರಿನೆ।
ಯ್ದಿರಿದಯ್ ಬಯ್ಗುಳಿನಬ್ಬೆಯ
ನರಿಯದರಃ ತೋಷಮಂ ಬಗೆಗುಮನ್ನೆಯಮಂ ॥ ೧೬ ॥

ಮಗೂ, ನೋಡು. ಪಾಪವೆ ರೂಪುಗೊಂಡಂತಿರುವ ಕ್ಷತ್ರಿಯನಿಗೆ

ಪುಸಿಗೊಲೆಲಂಚಂಗುಳಿಗ
ಳ್ಗೆ ಸಮಾನಳ್ಭೂಮಿ ಪೆಣ್ಸರಿಗೆ ಕೆಳೆಯಂ ಸೂ।
ನುಸಹೋದರರರಿಗಳ್ಪ
ತ್ರಸಿತವ್ಯಜನಂಗಳೂರಪಾಪಂ ಲಾಭಂ ॥ ೧೭ ॥

ಲಕ್ಷ್ಮ—ನಾನು ರಾಜ್ಯಾಭಿಲಾಷೆಯಿಂದಿಂತು ಹೇಳುವುದಿಲ್ಲ.

ರಾಮ—ಮತ್ತಾವುದು ನಿನ್ನ ಕೋಪಕ್ಕೆ ಕಾರಣವು ?

ಲಕ್ಷ್ಮ—ಕ್ರಮವು ಬೇರ್ಪಡಿಸಲ್ಪಟ್ಟಿತೆಂಬುದು.

ರಾಮ—ಹಾಗಾದರೆ ನಾನೆ ನಿನ್ನ ಬಯ್ಗುಳಿಗೆ ಮೊದಲು ಗುರಿಯಾಗುವೆನು; ಏಕೆಂದರೆ.

ಇಂದ್ರಂಬೊಲ್ಪಡಲಿಟ್ಟು
ವೀರೇಂದ್ರರ್ಕಳನೆಮ್ಮ ತಂದೆ ನೆಗಳ್ದಿರೆ ಸೊಬಗಿಂ।
ದಾಂ ದ್ರುತಲಜ್ಜನೆನೋತು ಮೃ
ಗೇಂದ್ರಾಸನಮಂ ದಲೇರಲಾಗಳ್ಬಗೆದೆಂ ॥ ೧೮ ॥

ಸೀತೆ—ಆರ್ಯಪುತ್ರನು ನುಡಿದುದು ನನ್ನಿಯೆ.

ಲಕ್ಷ್ಮ—ತಾನು ಕೆಳವನೆಂದಯ್ಯನು ಹಾಗೆ ನಿನ್ನನ್ನಾಜ್ಞಾಪಿಸಿದನು.

ರಾಮ—ಹಾಗಾದರೆ ಭರತನು ನನ್ನಿಂದಲೂ ಚಿಕ್ಕವನಷ್ಟೆ.

ಲಕ್ಷ್ಮ—'ನಾನು ತಿರೆಯನ್ನು ಪೊರೆಯಲು ಸಮರ್ಥನಲ್ಲ'ವೆಂದು.

ರಾಮ—ಮಗೂ, ನೋಡು—

ಆವನ ತೋಳ್ವಲ್ಮೆನೆಗ
ಳ್ತಾವಾಸವರಿಪುಗಳಂ ಸದೆದು ಸಗ್ಗಮುಮಂ।
ಭಾವಿಸಿ ಪೊರೆಗುಂ ಜಗತೀ
ದೇವತೆಯವನೆಂತಿದಂ ಸಲಪಲಸಮರ್ಥಂ ॥ ೧೯ ॥

ಲಕ್ಷ್ಮ—ಆದರೆ ಮಗನ ಮೇಗಣ ಪ್ರೀತಿಯಿಂದ ಅಂತಹ ಅನುಚಿತ ಕಾರ್ಯವನ್ನೆಸಗಿದಳೆಂದಿಷ್ಟೆ.

ರಾಮ—ಹಲವು ಮಕ್ಕಳುಳ್ಳವರಿಗೊಬ್ಬನಲ್ಲಿ ಸ್ವಲ್ಪ ಪಕ್ಷಪಾತವಿರುವುದು ಲೋಕಸ್ವಭಾವವು. ನಿನ್ನ ಭ್ರಾತೃಪ್ರೇಮವೊಂದೇ ತೆರನಾಗಿರುವುದೇ?

ಲಕ್ಷ್ಮ—ಹೆಚ್ಚೇಕೆ, ನಮ್ಮ ತಂದೆವಿರ ಸಾವಿಗೆ ಹೇತುವವಳಲ್ಲದೆ ಬೇರಿಲ್ಲ.

ರಾಮ—ಅಲ್ಲ, ಅಲ್ಲ. ಆ ತಾಯಿ ತಂದೆಯೆಡೆಯಲ್ಲಿ ಅಪರಾಧಿನಿಯಲ್ಲ ; ಏಕೆಂದರೆ—

ಕುಡಿಯುನ್ನೀರ್ತರಲಂಧವೃದ್ಧಪಿತೃಗಳ್ಗೂರೂಢ್ವವಂ ತಾಪಸಂ
ನಡೆದೊರ್ಬ್ನಂಚೆಯೊಳಳ್ದೆ ತನ್ನ ಕೊಡನಂ ದೀರ್ಘಸ್ವನಂ ಪೊಣ್ಮೆ ಕಾಲ್ ।
ಡೆಡೆಯಂ ಬೇಟೆಗೆ ಸಾರ್ದ ರಾಜತಿಲಕಂ ಗೆತ್ತಾನೆಯಂ ಬಾಣಮಂ
ಪಿಡಿದೆಚ್ಚಂ ಪಲಗಾಲದಿಂ ಹರಣಮುಂ ಪೀರ್ದತ್ತು ಕೋಲಾಣ್ಮನಾ
|| ೨೦ ||

ಸೀತೆ—ಯುಕ್ತವಿದು. ಅಂತಹ ವಿಧಿಯಿದ್ದಿರಬೇಕು. ಇಲ್ಲದಿದ್ದರೆ ಯಾವ ಹೆಣ್ಣುತಾನೆ ತನ್ನನ್ನೂ ಲೋಕವನ್ನೂ ಕೆಡಿಸುವಳು ?

ಲಕ್ಷ್ಮ—ಹಾಗಾದರೆ ನಾನೆ ತಪ್ಪಿದೆನು. ಅಣ್ಣನು ಮನ್ನಿಸಬೇಕು. ಮಾತಿನ ಪರಿವಿಡಿಯಿಂದ ದಾರಿಯನ್ನರಿಯದೆ ಪರ್ಣಶಾಲೆಯ ಬಳಿಗೆಯ್ತಂದೆವು. ಆರ್ಯನು ಪ್ರವೇಶಿಸಬೇಕು.

ರಾಮ—ಲಕ್ಷ್ಮಣ, ನೀನೂ ಏಕಾಂತದಲ್ಲಿ ದಣಿವಾರಿಸು.

ಲಕ್ಷ್ಮ—ಅಣ್ಣನಪ್ಪಣೆ. ( ಹೋಗುವನು )

ರಾಮ—( ಎಲೆಮನೆಯನ್ನು ಹೊಕ್ಕು ಸುತ್ತಲೂ ನೋಡಿ ಅಚ್ಚರಿಯಿಂದ) ದೇವಿ, ನೋಡು, ನೋಡು ತಮ್ಮ ಲಕ್ಷ್ಮಣನ ಕುಂದಿಲ್ಲದ ಜಾಣ್ಮೆಯನ್ನು. ಇಲ್ಲಿಯಾದರೊ

ಮೃಗನಿಕರಂಗಳೋಡಿದುವು ತಮ್ಮನ ಚಾಪನಿನಾದದಿಂ ಮನಂ
ಬುಗುವೆಲೆವಂಬಲಿಂ ಸಮೆದ ಸಾಲೆಯುಮಿರ್ಪುದು ಸೆಜ್ಜೆ ಪೂಗಳಿಂ ।
ಬಿಗಿದುದು ನವ್ಯಮಾಗಿ ಮಣೆ ಚಿತ್ರಗಳಿಂ ನೆರೆ ಚೆಲ್ವುವೆತ್ತುದೀ
ಸೊಗನೆಲೆಯೊಳ್ನೆಲಂ ರುಚಿರಮುಂ ಸುಮದಿಂ ಜಲದಿಂ ಪವಿತ್ರಮುಂ
|| ೨೧ ||

ಸೀತೆ—ಪ್ರಾಣನಾಥ, ಹೂದಳಿರುಗಳಿಂದ ತುಂಬಿದ ಪರ್ಣಶಾಲೆಯ ಸೊಬಗು ಅರಮನೆಯಲ್ಲಿರುವ ನನ್ನ ಬಹುಮಾನವನ್ನು ತಿರಸ್ಕರಿಸುವುದು.

ರಾಮ—ದೇವಿ, ಈ ತಾಣವು ನಿರ್ಜನವಾದುದರಿಂದ ಮನಬಂದಂತೆ ವನಮಾರುತವನ್ನು ಸೇವಿಸು. ಎಂತೆಂದರೆ

ಸಂದೆಯಮನುಳಿದು ನೀಂ ಕಳೆ
ಗುಂದಿದ ಮೊಲೆದುಗುಲಮಂ ಸಡಿಲ್ಚು ಮನೋಜಾ।
ನಂದದ ಕಣಿ ಬಿಂಬಾಧರ
ಮಂ ದಲ್ಯೋಷಿಪುದು ಕಿನ್ನ ನಿಟ್ಟುಸಿರೀಗಳ್ ॥ ೨೨ ॥

ಸೀತೆ— ಆರ್ಯಪುತ್ರನಾಣತಿಯಂತಾಗಲಿ.

(ಹೋಗುವರು)

ಇಂತು ಶ್ರೀರಾಮಕೃಷ್ಣಭಟ್ಟವಿರಚಿತವಾದ ಶಕ್ತಿಭದ್ರಮಹಾಕವಿಯ ಕನ್ನಡ ಚೂಡಾಮಣಿ ನಾಟಕದೊಳ್ ಒಂದನೆಯಂಕಂ ಮುಗಿದುದು.

---

# ಎರಡನೆಯಂಕ

---

(ಮನೋಹರ ವೇಷವನ್ನು ತಾಳಿ ಶೂರ್ಪಣಖೆ ಪ್ರವೇಶಿಸುವಳು)

ಶೂರ್ಪ—(ಬೇಸರಿನಿಂದ) ಇನ್ನೊಮ್ಮೆ ಆ ರಾಮನನ್ನೇ ಪತಿಯಾಗೆಂದು ಬೇಡುವೆನು. ಅವನ ಮಾತನ್ನು ನಂಬಿ ಮೂಢನಾದ ಲಕ್ಷ್ಮಣನೆಡೆಗೆ ಹೋಗಿ ಕೃತಾರ್ಥಳಾಗದೆ ಹಿಂದಿರುಗಿದೆನು. ಸರಸತಿ ಬುದ್ಧಿಹೀನನೆಂದರಿತ ಬಳಿಕ ಹಿಂದೆ ಬಾರದಿರುವಳೆ? ಕರುಣೆಯೂ, ಪೌರುಷವೂ, ಧರ್ಮವೂ, ದಾಕ್ಷಿಣ್ಯವೂ ಸ್ವಲ್ಪವೂ ಇಲ್ಲದ ಆ ಮನುಷ್ಯಜಂತುವನ್ನಿದುವರೆಗೆ ಸುಮ್ಮನೆ ಪರ್ಣಶಾಲೆಯ ಬಳಿಯಲ್ಲಿ ಕಾಯ್ದೆನು. ಅಕ್ಕಟಾ! ನಿರ್ಭಾಗ್ಯಳಾದ ನಾನೆದೆಯಲ್ಲಿ ಮುಳ್ಳನ್ನು ನಾಟಿಸಿದೆನಲ್ಲಾ! ಇಲ್ಲದಿದ್ದರೆ, ನನ್ನನ್ನು ನೂಕಿದ ಅವನ ಭಾಗ್ಯವೇ ಅಷ್ಟು. ಇರಲಿ. ಇವನಣ್ಣನಿಗೆಲ್ಲವನ್ನೂ ತಿಳುಹಿ ಆ ಮೇಲೆ ನೋಡುವೆನು. (ನಡೆವಳು)

(ಸೀತೆಯೊಡನೆ ರಾಮನು ಬರುವನು)

ರಾಮ—ಜಾನಕಿ, ದೂರದಲ್ಲಿ ಎಲ್ಲವೂ ಅದ್ಭುತಗಳಾಗಿ ತೋರುವುವು. ನೋಡು—

ಮುಗಿಲಂ ಮೆಯ್ವಣ್ಣದೊಳ್ಬೆಟ್ಟುಗಳನಳವಿಯೊಳ್ಪೋಲ್ವ
ಕೂಳ್ರಕ್ಕಸರ್ಕಾ
ಡುಗಳೊಳ್ಪಿಂಪಾಳ್ದ ಸತ್ಪಂಚವಟಿಯೊಳೊಳರೆಂದುಚ್ಚವಂ
ಪೆರ್ಚಿತೆನ್ನಾ ।
ಬಗೆಯೊಳ್ಕಾಂತೇ ಚಿರಾವಾಸದೆ ವಿಪಿನಮಿದುದ್ಯಾನಭೋಗಂಗಳಂ ನೀ
ಡುಗುಮಿಂತತ್ಯದ್ಭುತಂಗಳ್ನಗ ಗಹನಸಮುದ್ರಂಗಳಕ್ಕುಂ ಪೆರರ್ಗೆ ||೧||

ಸೀತೆ—ಆರ್ಯಪುತ್ರ, ಅಂತಃಪುರದಲ್ಲೆ ಯಾವಾಗಲು ವಾಸಿಸುವವರಿಗೆ ಕಾಡಿನಚ್ಚರಿಗಳನ್ನು ಮತ್ತೆ ಹೇಳಿ ಹೇಳಿ ವಿಸ್ಮಯವನ್ನುಂಟುಮಾಡಬೇಕೆಂಬ ಹಿರಿಯಾಸೆ ನನಗೂ ಉಂಟು.

ಶೂರ್ಪ—(ಹತ್ತಿರ ಬಂದು) ಆರ್ಯನಿಗೆ ಜಯವಾಗಲಿ.

ರಾಮ—ಸುಂದರಿ, ಲಕ್ಷ್ಮಣನನ್ನು ಕಂಡೆಯಾ?

ಶೂರ್ಪ—ಹೌದು, ಕಂಡೆನು.

ರಾಮ—ಅವನು ನನ್ನ ಮಾತನ್ನು ಕೇಳಿದನೆ?

ಶೂರ್ಪ—ಕಂಡಿತವಾಗಿ ಕೇಳಿದನು.

ರಾಮ—ಹಾಗಾದರೆ ನಿನ್ನನ್ನೇಕೆ ತಿರಸ್ಕರಿಸಿದನು ?

ಶೂರ್ಪ—'ತಾಪಸ ಧರ್ಮದ್ಧಿಂದಣ್ಣನನ್ನು ಸೇವಿಸುತ್ತಿರುವ ನನಗೆ ತಪೋಭಂಗಕ್ಕೆ ಕಾರಣಳಾದ ನಿನ್ನಿಂದೇನಾಗಬೇಕು ?' ಎಂದು.

ರಾಮ—(ಮುಗುಳು ನಗೆಯಿಂದ ಸ್ವಗತ) ಅವನು ಹೀಗೆ ಹೇಳಿರಬೇಕು. (ಪ್ರಕಾಶ) ಕಲ್ಯಾಣಿ, ಇನ್ನೊಮ್ಮೆ ನಿನ್ನನ್ನು ದಣಿಸಲೆಳಸುವೆನು.

ಶೂರ್ಪ—ಆರ್ಯ, ಬೇಡ. ಹೀಗೆನ್ನಬೇಡ. ಇಲ್ಲಿಯೆ ಇರುತ್ತ ಆರ್ಯನಡಿದಾವರೆಗಳನ್ನು ಪಚರಿಸುವೆನು.

ಸೀತೆ—ಈ ಬಡ ಹೆಂಗುಸು ಆರ್ಯಪುತ್ರನಲ್ಲೊದವಿದ ಕೂರ್ಮೆಯಿಂದ ತನ್ನ ಗುಣಪಕ್ಷಪಾತವನ್ನು ತೋರ್ಪಡಿಸುವಳು.

ರಾಮ— (ಶೂರ್ಪಣಖೆಯನ್ನು ನೋಡಿ) ಸೊಬಗಿನವಳೆ, ನಿನ್ನೀ ಬಯಕೆ ನನಗೂ ಬಹಳ ಇಷ್ಟವೆ. ಆದರೆ-

ತಂದೆಯ ಮೇಣ್ವಸಿಷ್ಠಮುನಿಯಪ್ಪಣೆಯಿಂದರಕಾಂ ವಿದೇಹರಾ
ಣ್ನಂದನೆಯಗ್ನಿಸನ್ನಿಧಿಯೊಳಿತ್ತ ಕರಾಬ್ಜಮನೆತ್ತಿದೆಂ ಪರಾ।
ನಂದಮನೆಯ್ದಿ ಸೂರೆಗೊಳಲಿರ್ಪೆನಗಕ್ಕುಮಿವಳ್ಮಹಾಂತರಾ
ಯಂ ದಿಟಮೆನ್ನ ಬಟ್ಟೆಯಿದು ನೀನದರಿಂ ಬಗೆಯೊಳ್ಳಿತಂ ವಧೂ ॥೨॥

ಶೂರ್ಪ—ಹಾಗಾದರೆ ಬೇರೆಡೆಗೆ ಹೋಗಲೆನ್ನಿಂದಾಗದು. ಇಲ್ಲಿಯೇ ಇದ್ದು ಪ್ರಾಣವನ್ನು ತೊರೆವೆನು.

ಸೀತೆ—ಪ್ರಾಣೇಶ್ವರ, ಈಕೆಯ ಮನೋನಿರ್ಣಯವನ್ನೆಂತಾದರೂ ಉಪೇಕ್ಷಿಸಲಾಗದು.

ರಾಮ—ಭದ್ರೆ, ಇನ್ನೊಮ್ಮೆ ಲಕ್ಷ್ಮಣನ ಬಳಿಗೆ ಹೋಗೆಂದು ನಿನ್ನನ್ನು ಬೇಡುವೆನು.

ಶೂರ್ಪ—ಅಕ್ಕಟಾ! ಅಕ್ಕಟಾ!! ಆರ್ಯನ ನುಡಿಯನ್ನು ನಂಬಿ ನಾನು ಹೆಂಗುಸರ ನೀತಿಯನ್ನು ಕೆಡಿಸಿದೆನು.

ರಾಮ—ಭದ್ರೆ, ಹಾಗೆನ್ನಬೇಡ. ಇದು ಸನಾತನಧರ್ಮವು. ನೋಡು-

ಸ್ತ್ರೀಯರ್ಗಭಿಸರಣಂ ಸದು
ಪಾಯಮುದಲ್ತೆಂದು ಭಾವಿಸಲ್ವೇಡಾ ನ।
ಕ್ರಾಯಣಮಂ ಬಾಂದೊರೆವೆ
ಣ್ಣಾಯೂಸಂಬಟ್ಟು ತಾನೆ ಪೊಂದುಗುಮಳಿಪಿಂ ॥ ೩ ॥

ಶೂರ್ಪ—ಆರ್ಯನಡಿದಾವರೆಯ ಊಳಿಗದವಳಾದ ನಾನೇನನ್ನು ಮಾಡಲಾರೆನು? (ಸ್ವಗತ) ಇರಲಿ. ಈಗಳೂ ಅವನು ಬಗೆಗಡುಹಿಂದ ನನ್ನನ್ನು ನೂಕಿದರೆ ಮತ್ತೆ ನನ್ನ ಸಹಜವಾದ ಪ್ರಕೃತಿಯನ್ನು ಕೈಯ್ಕೊಳ್ಳುವೆನು. (ಎಂದು ಹೋಗುವಳು)

ಸೀತೆ—ಪ್ರಾಣನಾಥ, ನೀನಾ ಬಡಗನ್ನೆಯನ್ನು ಹಿಂದಟ್ಟಿದುದರಿಂದ ನನ್ನ ಬಗೆ ಕಳವಳಕ್ಕೀಡಾಯ್ತು.

ರಾಮ—ದೇವಿ, ತಡೆಯಿಲ್ಲದೆಡೆಯಾಡುವ ಹೆಂಗುಸಿಗೆ ಕುಟುಂಬಿಗಳ ನಂಟೆಂತು ಸಿಗುವುದು?

ಸೀತೆ—ಹಾಗಾದರೆ ಹೊಲ್ಲಹದ ಹೆಣ್ಣನ್ನೇಕೆ ಕುಮಾರನ ಬಳಿಗಟ್ಟಿದೆ?

ರಾಮ—ಪ್ರಿಯೆ, ತಮ್ಮನಿಗೆ ಅವಳೊಡನೆ ಸಂಬಂಧವೆಂತು ಸಮನಿಸುವುದು? ಇದಾದರೆ ಅವಳನ್ನು ದೂಡಲೊಂದುಪಾಯವು.

ಸೀತೆ—ಆಹಾ! ಕುಮಾರನೂ ಅಟ್ಟಿದರೆ ಆಕೆಯ ಗತಿಯೇನು?

ರಾಮ—(ಸೀತೆಯನ್ನು ದಿಟ್ಟಿಸಿ) ಪ್ರಿಯೆ, ಅದೆಲ್ಲ ಹಾಗಿರಲಿ.

ನಡೆಪಂ ಮೆಲ್ಲಡಿವೂಗಳಿಂ ಸಮನಿಕುಂ ಕಾಳ್ಪೊಚ್ಚನೀರಿಂದೆ ಮೆ
ಳ್ಪಡಿಪಿನ್ನೂಟಮಿಳಾತಳಂ ಕಠಿಣಮುಂ ಮೆಲ್ಪಾಸು ಮಾಹಂ ಕರಂ।
ತೊಡವಕ್ಕುಂ ತರಳಾಯತಾಕ್ಷಿ ನಿನಗಿಂದಿಂತಾದೊಡಂ ಕಣ್ಗಳಂ
ಬೆಡಗಿಂದಿಳ್ಕುಳಿಗೊಳ್ವೆ ಎನ್ನ ಪೊಳಲೊಳ್ಕನ್ನಿರ್ದಪಾಂಗಿಂದಿದೇಂ
|| ೪ ||

ಸೀತೆ—(ಸ್ವಗತ) ಅಂದು ಮಹರ್ಷಿಪತ್ನಿಯಾದ ಅನುಸೂಯೆ ನನ್ನನ್ನು ತನ್ನಾಶ್ರಮದಿಂದ ಬೀಳ್ಕೊಡುವಾಗ 'ನಿನ್ನ ಪತಿಯೆದುರಲ್ಲೆಲ್ಲವೂ ಅಲಂಕಾರಗಳಾಗುವುವು' ಎಂದು ಕೊಟ್ಟ ವರವು ಆರ್ಯಪುತ್ರನ ಕಿವಿಯಲ್ಲಿ ಬಿದ್ದಿಲ್ಲವೆಂದು ತೋರುವುದು.

(ನೇಪಥ್ಯದಲ್ಲಿ) ನಿಲ್ಲು, ನಿಲ್ಲು, ಕೆಟ್ಟ ರಕ್ಕಸೀ, ನಿಲ್ಲು.

ರಾಮ—(ಕಿವಿಗೊಟ್ಟು) ಏನು! ಲಕ್ಷ್ಮಣನ ದನಿಯಂತಿದೆ.

ಸೀತೆ—ಹೌದು. ಅವನ ದನಿಯೇ.

(ಆಮೇಲೆ ನಿಜರೂಪವನ್ನು ತಾಳಿದ ಶೂರ್ಪಣಖೆಯೊಡನೆ ಬಿಚ್ಚುಗತ್ತಿಯನ್ನು ಹಿಡಿದ ಲಕ್ಷ್ಮಣನು ಪ್ರವೇಶಿಸುವನು)

ಲಕ್ಷ್ಮ—ನಿಲ್ಲು, ನಿಲ್ಲು, ಕೆಟ್ಟ ರಕ್ಕಸೀ, ನಿಲ್ಲು.

ರಾಮ—(ಕೇಳಿ, ನೋಡಿ) ಲಕ್ಷ್ಮಣ, ಏನಿದು?

ನಿಡುಗೆನ್ನವಿರಗದೇಹಂ
ಕುಡುದಾಡೆಯುಮಭ್ರವರ್ಣಮಿಂತಿವನಾಂತೀ!
ಗಡಿನ ಭಯಂಕರ ರೂಪಂ
ಕುಡುಗುಂ ತಾಟಕೆಯ ವೈರಿಗೆನಗಂ ಪೆಳರಂ || ೫ ||

ಸೀತೆ—(ಬೆದರಿ) ನಾಥಾ, ತಡೆ, ತಡೆ ಈಗಳೆ ರಾಕ್ಷಸಿಯನ್ನು.

ರಾಮ—ದೇವಿ, ಹೆದರಬೇಡ, ಹೆದರಬೇಡ. ಹಿಂದೆ ಚಿತ್ರಭಿತ್ತಿಯಲ್ಲಿ ರಕ್ಕಸಿಯ ರೂಪನ್ನು ನೀನು ನೋಡಿಲ್ಲವೆ?

ಸೀತೆ—ಮನವೇ, ಏನಿದು? ಇಲ್ಲಿಯೇ ಆರ್ಯಪುತ್ರನಿರುವನಷ್ಟೆ. ಅವನೊಡನಿರುವ ನಿನಗೇಕೆ ನಡುಕವು?

ಶೂರ್ಪ—ತಾಪಸರ ಅಡಗಿನೂಟದಿಂದ ಬೇಸತ್ತು ಹಸಿದ ನನಗಿಂದು ಭಾಗ್ಯವಶದಿಂದ ಎರಡು ಮೃದುಮಧುರಗಳಾದ ಹೆಚ್ಚಿನ ತಿನಿಸುಗಳು ತಾವಾಗಿ ಒದವಿದುವು. ಹೌದು. ಇವರಿಬ್ಬರನ್ನು ತಿಂದು ಸೀತೆಯನ್ನು ಅಣ್ಣ ರಾವಣನಿಗೆ ಕಾಣ್ಕೆಗೊಡುವೆನು.

ಲಕ್ಷ್ಮ—ಈಕೆ ನನ್ನಿದಿರಿಗೋಡಿ ಬರುವಳು.

ಮುಗಿಲಂ ಮೆಯ್ಯುರ್ವಿಂ ಮು
ಟ್ಟುಗುಮೆಳೆಯುಂ ತುಳಿದು ಮಾಡುಗುಂ ಪಳ್ಳಮುಮಂ।
ನಗರದ ಬಾಗಿಲ್ವೋಲ್ಬಾ
ಯ್ಬಗಿದು ಭಯಾನಕ ಶರೀರೆ ಬಂದಪಳೀಗಳ್ ॥ ೬ ॥

ರಾಮ—ಇದೊ ಈಕೆ,

ತಿರೆಯೊಳ್ಪರಿಗುಂ ಬಾಂಗುರು
ಭರದಿಂ ನೆಗೆಗುಂ ನಿಲುತ್ತುಮುರ್ವುಗುಮೋಡಾ।
ಡಿರಿಗುಂ ಮುಗಿಲೊಡ್ಡುಗಳಂ
ಸುರಿಗೆವೊಲಿರ್ಪುಗುರ್ಗಳಿಂದೆ ನೇಸರ್ಬಳಿಯೊಳ್ ॥ ೭ ॥

ಸೀತೆ—ಪ್ರಾಣಕಾಂತ, ಈಗಳೆ ಈ ರಕ್ಕಸಿಯನ್ನು ತರುಬು.

ರಾಮ—ಪ್ರಿಯೆ, ಹೆದರಬೇಡ, ಹೆದರಬೇಡ.

ಇದು ರಕ್ಕಸಿಯಲ್ತು ತಿರು
ಳ್ಪುದುಗದ ಜಂತ್ರಂ ಪುಣುಂಬು ತಾಗಲೊಡಂ ಕ್ರಂ।
ದದೆ ನೊಂದವನಿಯೊಳೀಗ
ಳ್ಮದಿರೇಕ್ಷಣೆ ನೋಡು ಬೀಳ್ಗುಮೆನ್ನಣ್ಮಿಂದಂ ॥ ೮ ॥

ಲಕ್ಷ್ಮ—ಅಣ್ಣನು ಕರುಣಿಸಬೇಕು. ನಾನೇ ಈಕೆಯನ್ನು ತಡೆವೆನು.

(ಎಂದಡ್ಡಗಟ್ಟುವನು)

ಶೂರ್ಪ—ಕಷ್ಟ! ಇದೇನನರ್ಥವು! ಇನಿಯವಾದ ತಿನಿಸುಗಳೂ ನನ್ನಲ್ಲಿ ಪರಾಕ್ರಮವನ್ನು ತೋರುತ್ತಿವೆ.

ಲಕ್ಷ್ಮ—ಆಃ! ನಿನ್ನನ್ನೀಗ ಹದ್ದುಗಳಿಗೆ ಹಚ್ಚುಗೊಡುವೆನು.

ಶೂರ್ಪ—ಈ ದುಷ್ಟನನ್ನು ಮೊದಲೆ ಏಕಾಂತದಲ್ಲಿ ತಿನ್ನುವೆನು.

ಲಕ್ಷ್ಮ—ಇದೊ ಈಕೆ ನನ್ನನ್ನು ಹಿಡಿದಿಟ್ಟಳು. ಆಹಾ! ನನ್ನ ಮನಸ್ಸು ಬೇರೆತ್ತಲೋ ಸರಿದಿತ್ತು.

ರಾಮ—ನಿಲ್ಲು, ನಿಲ್ಲು.

ಅಪರಾಧಿಯೊಳಾಮುಲ್ತು ಮು
ನಿಪರುಳಿ ಮುನಿಸಂ ಮೆರಂ ಪಿಡಿದೆನಾಂ ಬಿಲ್ಲಂ।
ಕಪಟನಿಶಾಚರರೊಳ್ನಿ
ಷ್ಕೃಪಮಾವಗಮೆಮ್ಮ ಬಾಣನಿಕರಂ ದುಷ್ಟೇ ॥೯॥

ಶೂರ್ಪ—(ಲಕ್ಷ್ಮಣನನ್ನು ಹಿಡಿದು) ಅಕ್ಕಟಾ! ಗಿರಿಶಿಖರಗಳು ಹಗುರಗಳು.

(ಆಗಸಕ್ಕೆ ಹಾರಿ ಹೋಗುವಳು)

ರಾಮ—(ದುಗುಡದಿಂದ) ದೇವಿ, ನೀನಿನ್ನೂ ಹೆಣ್ಗಳ ಸಾಜವನ್ನು ಬಿಡುವುದಿಲ್ಲವೆ?

ಬೆದರಿಕೆಯೊಡನೆನ್ನಂ ಬಿಡು
ಮೃದುಬಂಧುರಗಾತ್ರಿ ಧೈರ್ಯಮಂ ನೀಡುಂ ತಾ।
ಳ್ದಿದಿರೊಳ್ಬಾನೊಳ್ ರಕ್ಕಸಿ
ಮದದಿಂ ಲಕ್ಷ್ಮಣನನೆತ್ತಿ ಕೆಯ್ಯಿಂ ಪೋಕುಂ ॥೧೦॥

ಸೀತೆ—ಪ್ರಿಯನೆ, ನನ್ನನ್ನಾವನು ರಕ್ಷಿಸುವನು?

ರಾಮ – ಲಕ್ಷ್ಮಣನನ್ನಾರು ರಕ್ಷಿಸುವರು?

ಸೀತೆ—ಅವನಿಗಾದರೆ ಕೈಯಲ್ಲಿ ಕೆಯ್ದುರುವುದು.

ರಾಮ—(ಖೇದದಿಂದ) ರಕ್ಕಸಿಯ ತೋಳುಗಳೆಡೆಯಲ್ಲಿ ಸಿಲುಕಿದವನಿಗೆ ಕೆಯ್ದಿನಿಂದೇನು ಪ್ರಯೋಜನವು?

ಪೊಡವಿಯೊಳೆ ಕಾರ್ಯದಕ್ಷಂ
ಬಡವಾನಿಸವುಟ್ಟು ನಿಷ್ಪ್ರಯೋಜನಮಲ್ತೇ।
ಪಿಡಿದುಯ್ದು ತಮ್ಮನಂದಲ್
ಕಡೆಗಣ್ಚುತುಮೆನ್ನನೀಕೆ ಕಣ್ಮರೆಯಾದಳ್ ॥ ೧೧ ॥

ಸೀತೆ—(ವಿಷಾದದಿಂದ) ಅಯ್ಯೋ! ಕೆಟ್ಟವಳಾದ ನಾನು ನಾಥನನ್ನು ತಡೆದಿರಿಸಿ ಕುಮಾರನನು ಬರಿಗಿಕ್ಕಿದ ಕಣೆಯಾಗುವಂತೆ ಗೆಯ್ದೆನಲ್ಲಾ!

ರಾಮ—(ಬಾಣವನ್ನೆತ್ತುತ್ತ) ಆವ ದಿವ್ಯಾಸ್ತ್ರಕ್ಕೀಕೆಯನ್ನು ಗುರಿಮಾಡಲಿ? (ನೇಪಥ್ಯದಲ್ಲಿ) ಹಾ! ಹಾ!! ನನ್ನನ್ನು ಕೆಳಗುರುಳಿಸಿದನು. ಆರ್ಯನೇ ರಕ್ಷಿಸು, ರಕ್ಷಿಸು.

ರಾಮ—ಓಹೋ! ಹೆಣ್ಣಿನ ದನಿಯಂತಿದೆ. ಎತ್ತಣಿಂದೀ ನೆಲನಡುಕವು? ದಿಟವಾಗಿ ಲಕ್ಷ್ಮಣನು ರಕ್ಕಸಿಯನ್ನು ಬೀಳಿಸಿದನು.

ಸೀತೆ—ನಾನೂ ಅದನ್ನೆ ಊಹಿಸುವೆನು.

ರಾಮ—ಪ್ರಿಯೆ, ಕೆಯ್ಯನ್ನು ಹಿಡಿದು ನನ್ನನ್ನು ಹಿಂಬಾಲಿಸು; ನಾನೀಗ ತಮ್ಮನನ್ನು ಹುಡುಕುವೆನು.

ಸೀತೆ—ಯತ್ನಿಸುವೆನು. (ಇಬ್ಬರೂ ನಡೆವರು)

ರಾಮ—(ನಡೆದು ನೋಡಿ) ಓಹೋ!

ಗಿರಿಧಾತು ಸಾಂದ್ರತೋಯಂ
ಪರಿದುದೊ ಪೊಚ್ಚದ ವನಾಂತರಕ್ಕೀಂ ನೆತ್ತರ್।
ತರುಣಾರುಣವರ್ಣಂ ಮೇ
ಣುರುಕಾಲಪಯೋದಮಧ್ಯದಿಂ ಬಿಳ್ದತ್ತೋ ॥ ೧೨ ॥

(ಆ ಮೇಲೆ ಲಕ್ಷ್ಮಣನು ಬರುವನು)

ಲಕ್ಷ್ಮ—(ಮರುಕದಿಂದ) ಅಯ್ಯೋ! ಹೆಣ್ಣೆಂದು ಹೇಳುವೀಕೆಯ ಮೇಲೆ ಶಸ್ತ್ರವನ್ನೆತ್ತಿದ ನನಗೆ ಧಿಕ್ಕಾರವಿರಲಿ, ಅಥವಾ ಇದರಲ್ಲಿ ಪಶ್ಚಾತ್ತಾಪಕ್ಕೆಡೆಯಿಲ್ಲ; ಏಕೆಂದರೆ—

ಪುಸಿಗೆಯ್ದುಮನೀ ಕೂಳ್ರ
ಕ್ಕಸಿಯಣ್ಣನ ನೋಡಿ ಚಿತ್ತದಭಿಲಾಷೆಯುಮಂ ।
ದೆಸೆವಳರ್ಗೆ ಬಿರ್ದನೂಡ
ಲ್ಕೆಸೆವಸ್ತ್ರದೆ ತರಿದೆ ನೀಕೆಯಾ ಕಿವಿಮೂಗಂ ॥ ೧೩ ॥

ಈಗ ಅಣ್ಣನ ಸಮೀಪಕ್ಕೆ ಹೋಗುವೆನು. (ಹೋಗಿ) ಆರ್ಯನಿಗೆ ವಿಜಯವಾಗಲಿ.

ರಾಮ—(ಆನಂದದಿಂದಾಲಿಂಗಿಸಿ)

ಮನಮೇ ಉಸಿರ್ವಿಡು ಸೊಗದಿಂ
ದನಪಾಯಂ ಕುಶಲಿಯುಂ ಕುವರನಿರ್ಕುಂ ಕಾ ।
ನನದೊಳಮಿವನೊಡನಾಂ ಪ
ತ್ತನದಲ್ಲೆಂತಂತು ಸಂತಸಂಬಡುತಾಳ್ದಿಂ ॥ ೧೪ ॥

(ಮತ್ತೊಮ್ಮೆ ತಕ್ಕೈಸಿ) ತಮ್ಮಾ, ಆ ರಕ್ಕಸಿಯೆತ್ತ ?

ಲಕ್ಷ್ಮ—(ಸ್ವಗತ) ಏನೆಂದು ಹೇಳಲಿ? (ಕೀಳ್ಮೊಗನಾಗಿ ನಿಲ್ಲುವನು)
(ಬೊಬ್ಬಿರಿಯುತ್ತ ಶೂರ್ಪಣಖೆ ಬರುವಳು)

ಶೂರ್ಪ—ಹಾ ಅಣ್ಣ ರಾವಣಾ ! ಹಾ ಅಣ್ಣ ಕುಂಭಕರ್ಣಾ ! ಹಾ ಅಣ್ಣ ವಿಭೀಷಣಾ ! ಕಪಟತಾಪಸರ ಕೋಟಳೆಯಿಂದೆನ್ನನ್ನು ರಕ್ಷಿಸಿರಿ.

ರಾಮ—ಲಕ್ಷ್ಮಣ, ನೋಡು, ನೋಡು.

ಧಾತುರಸಾಂಚಿತಗಿರಿಪ್ರೋ
ಲ್ಲ್ಯಾತಃಕಾಲದರುಣಾಭ್ರದಂತರ್ಕಾಂಶೂ ।
ಪೇತತಮಾಲಂಬೊಲೆ ರ
ಕ್ತಾತತತನುವಿಂದೆ ಕೆಚ್ಚನೀ ಪೆಣ್ಮೋರ್ಕುಂ ॥ ೧೫ ॥

ಲಕ್ಷ್ಮ—(ಸ್ವಗತ) ಭಾಗ್ಯವಶದಿಂದಣ್ಣನು ತಾನಾಗಿ ನನ್ನೀ ನಿಂದ್ಯ ಕರ್ಮವನ್ನರಿತುಕೊಂಡನು.

ರಾಮ—ಲಕ್ಷ್ಮಣ, ನೀನು ಮಾಡಿದುದೊಳ್ಳಿತಾಯ್ತು. ಹೆಂಗುಸರಿಗೆ ಕೊಲೆಯ ತಾಣದಲ್ಲಿ ಇದೇ ತಕ್ಕುದಾದ ದಂಡನೆ.

ದಂಡಕಮೆಂಬೀ ಕಾಡೊ
ಳ್ಕೊಂಡಿರ್ಕುಂ ಬೀಡಸೀಕೆ ಶೂರ್ಪಣಖಾಖ್ಯೇ।
ಚಂಡಖರದೂಷಣರಾ
ಗಂಡುಗಲಿ ದಶಾಸ್ಯನಕ್ಕು ಮನುಜರುಮಣ್ಣಂ ॥ ೧೬ ॥

ಇಂತು ಜನರೆನ್ನುವರು.

ಶೂರ್ಪ—ಮನುಷ್ಯರಿರ, ನಿಮ್ಮ ಅವಿನಯವನ್ನು ನೆನೆಯಿರಿ. ಇಂದಿನಿಂದದರ ಫಲವನ್ನು ಕಾಣುವಿರಿ.

ಲಕ್ಷ್ಮ—ಆ! ಹೋಗತ್ತ, ಪಿಶಾಚೀ.

ಶೂರ್ಪ—ಖರದೂಷಣರಿಗೆ ನನ್ನೀಯವಸ್ಥೆಯನ್ನು ತೋರ್ಪಡಿಸುವೆನು. (ಹೋಗುವಳು)

ಸೀತೆ—ಇನಿಯನೆ, ಈಗ ನನಗುಸಿರು ಬಂದಿತು. ಇಲ್ಲದಿದ್ದರೆ ರಕ್ಕಸಿಗಳಿಂದಿಂತು ಭಯಂಕರವಾದ ಕಾಡಿನಲ್ಲಿ ಅಂತಹ ಚೆಲ್ವಿನ ಸೆಂಡಿನಂತಿರುವ ಸೀಮಂತಿನಿಯೆಂತಿರುವಳು?

(ರಾಮನು ಲಕ್ಷ್ಮಣನನ್ನು ನೋಡುವನು)

ಲಕ್ಷ್ಮ—(ಕಿವಿಯಲ್ಲಿ) ಹೀಗೆ, ಹೀಗೆ.

ಸೀತೆ—ನಾಥ, ಕುಮಾರನೇನನ್ನು ಹೇಳಿದನು?

ರಾಮ—ದೇವಿ,

ಕೆತ್ತುಂಬಾಯ್ತೆರೆಯಿಂದೆ ಸಂಚಳಿಪ ಮಿಾಂಗಣ್ಣಿಂ ಕುಚಾಭಾರದಿಂ
ದತ್ತಲ್ಬಳ್ಕುವ ಮಧ್ಯದಿಂದೆ ಪೊರವಾರ್ಬಿಣ್ಪಿಂ ಬೆಡಂಗಂಕರಂ।
ಪೆತ್ತೋರೊಂದಡಿಯಲ್ಲಿ ನೂರಡಿಗಳಂ ನಾಣಿಂ ಬಿಗುರ್ಪಗ್ಗಳಿಂ
ದಿತ್ತೀಪೆಣ್ ಖಳ ವೈರಿ ದೈವಬಲದಿತ್ತಳ್ಭೀತಿಯಂ ದೇವಿಗಂ ॥ ೧೭ ॥

ಸೀತೆ—ಇದು ಸಟೆ, ಇದು ಸಟೆ.

ರಾಮ—ಹಾಗಾದರೆ ಲಕ್ಷ್ಮಣನೇ ಹೇಳುವನು.

ಸೀತೆ—ಹೌದು. ಆಕೆಯಲ್ಲಿ ನನಗೆ ವಿಶ್ವಾಸವಿದ್ದಿತು. ಅದನ್ನಾರ್ಯಪುತ್ರನೆ ಚೆನ್ನಾಗಿ ನೀಗಿದನು.

ರಾಮ—ತಮ್ಮ ಲಕ್ಷ್ಮಣಾ, ನೀನವಳನ್ನು ಮೊದಲು ಹೇಗರಿತು ಕೊಂಡೆ?

ಲಕ್ಷ್ಮ— (ಮುಗುಳ್ನಗೆಯಿಂದ)ಎಲ್ಲರಲ್ಲಿಯೂ ದಾಕ್ಷಿಣ್ಯದಿಂದ ಅಣ್ಣನು ದೋಷವನ್ನು ಕಾಣುವುದಿಲ್ಲ. ಕಿಚ್ಚಿನ ಸೂಡನ್ನೆಂತು ಅಡಗಿಸಬಹುದು?

ರಾಮ—ಸತ್ಯವಿದು.

॥ ದುಷ್ಟವರ್ಣ್ಲ್ವಗೆಯರನಾ
ತ್ಮೇಷ್ಟದೆ ಬಸಕೀಳ್ಗು ಮಾನದಾಭೀಲಮುಮಂ ।
ಸೃಷ್ಟಿಯ ಮುಳ್ಳಿಲಿಗಿಡುವಂ
ಕಷ್ಟಂಬಡದಾಂಗುಮಲ್ತೆ ಬೇರುಗನೆಳೆಯೊಳ್ ॥೧೮॥

ಹೆಣ್ಣಾದುದರಿಂದ ಆಕೆಯನ್ನು ಅವಮಾನಿಸಲಾಗದು. ನೀನು ಮಾಡಿದುದೇನೊ ಕಠಿಣವಾದ ಕಾರ್ಯವು.

(ಲಕ್ಷ್ಮಣನು ಮೋರೆಯನ್ನು ಬಗ್ಗಿಸುವನು)

ಸೀತೆ—ನಾಥ, ಈಗಳೂ ರಕ್ಕಸಿ ನನ್ನಿದಿರಲ್ಲಿರುವಳೊ ಎಂಬಂತೆ ತೋರುವುದು.

ರಾಮ—

ಈಕೆಯ ಪೂರ್ವಜನಪ್ಪೊಡೆ
ಲೋಕಾಹಿತ ರಾವಣಂ ಶಯನಮಿಲ್ಲಂ ಬಿ ।
ಲ್ಗೀ ಕರ್ಬುರ ವೈರಂ ಭೂ
ಶೋಕಾತ್ಯಯಕಕ್ಕೆ ಸರ್ವರಾಕ್ಷಸ ವಧದಿಂ ॥ ೧೯ ॥

ಸೀತೆ—ಆರ್ಯಪುತ್ರ, ನೋಡು, ನೋಡು. ಸೂರ್ಯ ದೇವನು ರಕ್ಕಸಿಯ ನೆತ್ತರ್ಗೆಸರನ್ನು ಬೈಗುಂಬೊಳ್ತಿನ ಕೆಂಗದಿರ್ಗಳಿಂದೆತ್ತಿ ಮರದುದಿಗಳಿಗೆ ಲೇಪಿಸುವಂತೆ ಭಾಸವಾಗುವುದು.

ರಾಮ—ದಿವಸಾವಸಾನವಾಯ್ತು. ತಮ್ಮಾ,

ಬಿಲ್ಲಂ ಕತ್ತಿಯುಮಂ ಬಿಡು
ಮೆಲ್ಲನೆ ತಿಳಿಗೊಳನೊಳದ್ದಿ ಕಾಯಮುನಾಂ ಪ್ರಾ ।
ಣೋಲ್ಲಾಸಮನಾಚರಿಸುತೆ
ಮೆಲ್ಲುಲಿಯಿಂ ಸಂಜೆಯಂ ತುಳಿಲ್ಗೆಯ್ವಂದಲ್ ॥ ೨೦ ॥

ಲಕ್ಷ್ಮ—ಅಣ್ಣನಾಣತಿಯಂತೆ ಗೆಯ್ವೆನು. (ಹಾಗೆಯೆ ಮಾಡುವನು)

ರಾಮ—ಪ್ರಿಯೆ, ಇದೊ ನೋಡು.

ಶ್ರೀನಾಥಂ ಕಡಿದುತ್ತಮಾಂಗಮನರಂ ತೇರ್ಗಾಲಿನುದ್ವೃದ್ಧಕೋ
ಪಾನೂನಾನಲದಿಂದೆ ತೊಳ್ತುಳಿಯೆ ಕಾಲಿಂ ಬಿಳ್ದ ದುಷ್ಟಾಸುರಂ ।
ಬಾನಿಂ ರಕ್ತಕಣೌಘದಿಂ ನಮುಚಿ ಲೆಪ್ಪಂಬೂಸಿದಂತಾಶೆಯಂ
ಬಾನಾಣ್ಮಂ ಕದಿರ್ವಂಬಲಿಂದರುಣಮಂ ಕೆಯ್ಗುಂ ದಿಶಾವಕ್ತ್ರಮಂ ॥೨೧॥

(ಎಲ್ಲರೂ ಹೋಗುವರು)

ಇಂತು ಶ್ರೀರಾಮಕೃಷ್ಣಭಟ್ಟ ವಿರಚಿತವಾದ ಶಕ್ತಿಭದ್ರ ಮಹಾಕವಿಯ
ಕನ್ನಡ ಚೂಡಾಮಣಿ ನಾಟಕದೊಳೆರಡನೆಯಂಕಂ ಮುಗಿದುದು.

---

# ಮೂರನೆಯಂಕ

---

( ದಣಿದ ಋಷಿ ಕುಮಾರನು ಪ್ರವೇಶಿಸುವನು )

ಋಷಿ—ಸೂರ್ಯವಂಶವು ಚಿರಕಾಲ ಬಾಳಲಿ. ಆ ಕುಲದ ಶಿರೋಭೂಷಣನಾದ ಶ್ರೀರಾಮಚಂದ್ರನು ಖರದೂಷಣಾಧಿಷ್ಠಿತವಾದ ರಕ್ಕಸ ಪಡೆಯನ್ನು ಜನಸ್ಥಾನದಿಂದ ಯಮಸ್ಥಾನಕ್ಕೆ ಕಳುಹಿ ವನಪ್ರದೇಶಗಳು ನನ್ನಂತಹರಿಗೂ ಸುಖಸಂಚಾರಕ್ಷಮಗಳಾಗುವಂತೆ ಮಾಡಿದನು. ಈಗ ಶ್ರೀರಾಮನ ಸಹಾಯದಿಂದ ರಕ್ಕಸರ ನೆತ್ತರ ಸವಿಯನ್ನರಿತ ಮಿಳ್ತುನಾಲಗೆ ದಿಟವಾಗಿ ಲಂಕೆಯನ್ನೂ ನಕ್ಕುವುದು. ( ಸ್ವಲ್ಪ ನಡೆದು ) ಈಗ ನಾನೆಲ್ಲಿ ತೀರ್ಥಯಾತ್ರಾ ಪರಿಶ್ರಮವನ್ನು ನೀಗುವೆನು ? ( ನಡೆದು ನೋಡಿ ) ಇಲ್ಲಿ ಸಮೀಪದಲ್ಲಿಯೆ ಆಶ್ರಮವುಂಟೆಂದು ತೋರುವುದು ; ಏಕೆಂದರೆ

ವೇದೋಚ್ಚಾರಣದಿಂದೆ ಪಾಸಿದ ಹರಿದ್ದರ್ಭಂಗಳಿಂ ಸೈಕತಂ
ನಾದೇಯಂ ಪಸುರಕ್ಕುಮಂತೆಕುಡುಗುಂ ನಲ್ವಾತನಭ್ಯಾಸದಿಂ ।
ಪೇದಜ್ಞರ್ಕಳ ರಾಜಕೀರಮಿದಿರೊಳ್ತಾಯ್ಗೆಚ್ಚಲಂ ಬಿಟ್ಟು ಮೇ
ಣ್ಪೇದಂದೋರದೆ ಪುಲ್ಲೆ ಕಂಡು ಜಡೆಯಂ ಬರ್ಕುಂ ಕೆಲಕ್ಕೆನ್ನಯಾ
॥ ೧ ॥

ಇಲ್ಲಿ ವೇದಪಾಠವು ಕೇಳಿಸುವುದಿಲ್ಲ. ( ಆಲೋಚಿಸುತ್ತ ) ಹೋಮಧೂಮವೂ ಕಾಣಿಸುವುದಿಲ್ಲ. ಇರಲಿ. ಒಳಹೊಕ್ಕು ಅರಿವೆನು. ( ಹೊಕ್ಕು ನೋಡಿ ) ಈಯಾಶ್ರಮವು ಈಗಳೆ ಹಾಳಾದಂತಿರುವುದು ; ಎಂತೆಂದರೆ-

ಹುತಗಂಧಮನೀಗುಂ ಕುಂ
ಡತಳಂ ಬಂಡುಣಿಗಳೊಲ್ಮೆದೋರ್ಕುಂ ಬಲಿಯೊಳ್ ।
ತತತರುವಿಟಪಮನಡರ್ದೀ
ನುತವಲ್ಕಲಮುಂ ತಳಿರ್ಪೊಗರನಿರ್ಮಡಿಕುಂ ॥ ೨ ॥

ಇಲ್ಲಿ ಆರಾದರಿದ್ದರೆ ಕರೆವೆನು. ಅಯ್ಯಾ, ಆರಿರುವರಿಲ್ಲಿ ? ನಾನೊಬ್ಬನಭ್ಯಾಗತನು.

( ನೇಪಥ್ಯದಲ್ಲಿ ) ಇತ್ತ ಬರಬೇಕು ಅತಿಥಿಗೆ ಸ್ವಾಗತವು.

ಋಷಿ—ನಿರ್ಜನವಲ್ಲ.

( ಆ ಮೇಲೆ ಹೊರಡಲುದ್ಯುಕ್ತನಾದ ವೃದ್ಧತಾಪಸನು ಬರುವನು )

ವೃದ್ಧ—ಇತ್ತ ಬರಬೇಕು, ಅತಿಥಿಗೆ ಸ್ವಾಗತವು.

ಋಷಿ—ಅತ್ಯಂತ ವಿಶಾಲವಾದೀಯಾಶ್ರಮದಲ್ಲಿ ಈಗ ನೀನೊಬ್ಬನೆ ಉಳಿದಿರುವೆ ಎಂದು ಭಾವಿಸುವೆನು.

ವೃದ್ಧ—ಇದು ರಾವಣನ ಬಂಧುವಾದ ಮಾರೀಚನ ಆಶ್ರಮವು.

ಋಷಿ—ಅವನು ರಾಮಬಾಣದಿಂದುಪೇಕ್ಷಿಸಲ್ಪಟ್ಟವನೆಂದು ಕೌಶಿಕಸುತರಿಂದ ಕೇಳಿಬಲ್ಲೆನು. ಅವನೇ ಇವನೋ ?

ವೃದ್ಧ—ಹೌದು. ರಾವಣನ ತಂಗಿ ಶೂರ್ಪಣಖೆಯೆಂಬವಳಿರುವಳು.

ಋಷಿ—ತಡೆ. ಶೂರ್ಪಣಖೆಯ ವಿರೂಪಕರಣವನ್ನೂ ಖರದೂಷಣರ ಕೊಲೆಯನ್ನೂ ರಾಮನಾಜ್ಞೆಯಿಂದ ತಪೋವನದಲ್ಲಿ ಸಂಚರಿಸುತ್ತಿದ್ದ ಲಕ್ಷ್ಮಣನ ಬಾಯಿಂದಲೆ ಅರಿತೆನು. ಮಾರೀಚನವಿಷಯವೆ ನನಗೆ ಹೊಸತು.

ವೃದ್ಧ—ಬಳಿಕ ಕೋಪಗೊಂಡ ರಾವಣನು ಮಾರೀಚನಾಶ್ರಮಕ್ಕೆಯ್ತಂದನು.

ಋಷಿ—ಮತ್ತೆ?

ವೃದ್ಧ—ಮತ್ತೆ 'ಹುಲ್ಲೆಯ ರೂಪಿನಿಂದ ನೀನು ರಾಮನನ್ನು ಮೋಹಗೊಳಿಸಿ ದೂರಮಾಡು; ಅಷ್ಟರಲ್ಲಿ ನಾನು ಸೀತೆಯನ್ನು ಹಿಡಿವೆನು' ಎಂದು ಹಲವು ಸಾರೆ ರಾವಣನು ಅವನನ್ನು ನಿರ್ಬಂಧಿಸಿದನು.

ಋಷಿ—ಮತ್ತೆ, ಮತ್ತೆ?

ವೃದ್ಧ—ಆಗ ಮಾರೀಚನು ರಾಮನ ಗುಣಗಳನ್ನು ಹಲವು ವಿಧವಾಗಿ ಬಣ್ಣಿಸಿ ತುಸು ಸಮಯವನ್ನು ಸಿಕನಿದ್ದನು.

ಋಷಿ—ಅವನು ಮಾಡಿದುದು ಯುಕ್ತವೆ. ಬಳಿಕ?

ವೃದ್ಧ—ಬಳಿಕ ಕನಲಿದ ರಾವಣನು

ಕತ್ತಿಯನೊರೆಯಿಂ ಕುಡುವು
ರ್ವೆತ್ತುತೆ ನಗೆಯೊಡನೆ ಬಿರ್ಚಿವಂ ಬೆರ್ಚಿಸಿದಂ।
ಸುತ್ತೇ ಮಿಂದ್ರೇಭರದ
ಕ್ಕೆತ್ತುದು ಖಡ್ಗಂ ವಿವರ್ಣತೆಯನಚ್ಛತೆಯಿಂ ॥೩॥

ಋಷಿ—ಅದರಲ್ಲಿ ಅಚ್ಚರಿಯೇನೂ ಇಲ್ಲ. ಬಳಿಕ?

ವೃದ್ಧ—ಬಳಿಕ ಪ್ರಾಣಭಯದಿಂದಲೋ, ಪೂರ್ವವೈರದ ನೆನಹಿಂದಲೋ ಆತನು ಒಡನೆ ದಶಾಸ್ಯನ ಮಾತಿಗೊಡಂಬಟ್ಟನು.

ಋಷಿ—ದಿಟವಾಗಿ ಹುಟ್ಟಿಗೆ ತಕ್ಕುದಾದ ಅನುಷ್ಠಾನವು; ಏಕೆಂದರೆ-

ಏನಾನುಮೊಂದು ಕತದಿಂ
ಜಾನಕೆ ಸಮನಿಸದ ದುಷ್ಕರ ನಿಸರ್ಗಗುಣಂ।
ಲೀನಂ ಬೀಜದ ಸಂಸ್ಕೃತಿ
ಯಾ ನಯದಿಂದೊಗೆಗುಮಲ್ತೆ ಫಲಪಾಕದೊಡಂ ॥ ೪ ॥

ಆ ಮೇಲೆ?

ವೃದ್ಧ—ಆಮೇಲೆ ರಾವಣನ ಪೀಡೆಯಿಂದ ನೊಂದ ತವಸಿಗಳು ಇಲ್ಲಿಂದ ತೆರಳಿದರು. ನನ್ನ ಗಮನತ್ವರೆಯನ್ನಾದರೊ ನೀನು ನೋಡುತ್ತಿರುವೆಯಷ್ಟೆ.

ಋಷಿ—ಹಾಗಾದರೆ ನೀನು ಹೋಗಬಹುದು. ನಾನೂ ಇಲ್ಲಿಂದ ಹೋಗುವೆನು.

ವೃದ್ಧ—ಅಂತಾಗಲಿ.

(ಹೋಗುವರು)

॥ ವಿಷ್ಕಂಭಕ ॥

---

(ಸೀತೆಯೊಡನೆ ರಾಮನು ಬರುವನು)

ರಾಮ—(ದುರ್ನಿಮಿತ್ತವನ್ನು ನೋಡಿ) ದೇವಿ, ಈಗ

ಭರತಂ ಬಾಲಕನೆಂದು ಶತ್ರುನಿವಹಂ ತೋಳ್ವಲ್ಮೆಯಿಂ ರಾಜ್ಯಮಂ
ಪಿರಿದೊಯ್ದತ್ತೊ ದಿವಕ್ಕೆ ತಾಯ್ದಿರಳಲಿಂವೋಣ್ಪೋದರೋ ಜಾನಕೀ ।
ಖರಸಂಹಾರದ ಕೋಪದಿಂದೊಗೆದ ರಕ್ಷೋಮಾಯೆಯೇನಿರ್ಪುದೋ
ನೆರೆ ವಾಮಂ ಭುಜಮೆನ್ನಕೆತ್ತುಗುಮಿದೋ ನಿನ್ನೇಕ ಚೂಡಾಪ್ರಿಯಂ ॥೫॥

ಸೀತೆ—ನಾಥ, ತಪಸ್ಸೆ ಅಮಂಗಳಕ್ಕೆ ಶಾಂತಿಯಪ್ಪೆ.

(ಮಾರೀಚನು ಬರುವನು)

ಮಾರೀಚ—(ಚಿಂತಿಸುತ್ತ)

ಬಂಧುಸ್ನೇಹವೊ ಮೇಣೆ
ನ್ನಂಧಾನ್ವಯದಲ್ಲಿ ಪಾಪಜನ್ಮದ ಫಲವೋ ।
ಬಂಧುರಸದ್ವೃತ್ತಮನು
ದ್ಬಂಧಿಸಿ ಪಸವಟ್ಟೆನಾನೊಡರ್ಚಲ್ಸೆರಗಂ ॥ ೬ ॥

ಅಥವಾ ಹೆಚ್ಚೇಕೆ ?

ಶ್ರೀರಾಮನೆಂಬ ಪುರುಷಾ
ಕಾರದ ವೈಕುಂಠನಸ್ತ್ರಕಾಹುತಿಯಿತ್ತಾ ।
ನೀರಕ್ಕಸಮೆಯ್ಯಂ ಮುಂ
ನಾರಕಮಂ ಪೊಕ್ಕು ಕಾವೆನೆಲ್ಲಾ ಸಖರಂ ॥ ೭ ॥

ರಾಮನಾಶ್ರಮವೆತ್ತ ? ಅಲ್ಲಿಗೆ ಹೋಗಿ ಪತ್ನಿಯೊಡನಿದ್ದ ರಾಮನನ್ನು ವಿಚಿತ್ರ ಮೃಗರೂಪದಿಂದ ಮರುಳುಗೊಳಿಸುವೆನು. (ಹೋಗುವನು)

(ಕವಚವನ್ನು ಧರಿಸಿದ ಲಕ್ಷ್ಮಣನು ಬರುವನು)

ಲಕ್ಷ್ಮಣ—‘ಖರದೂಷಣರನ್ನು ಕೊಂದುದರಿಂದ ಜನಸ್ಥಾನವು ನಿಷ್ಕಂಟಕವಾಯ್ತು. ಅದರಿಂದ ನೀವು ಎಂದಿನಂತೆ ತಂತಮ್ಮಾಶ್ರಮಗಳನ್ನು ಸೇರಬಹುದು' ಎಂದು ಅಣ್ಣನಾಣತಿಯಿಂದ ಮುನಿವೃಂದಾರಕರೊಡನೆ ಬಿನ್ನವಿಸಿದೆನು. ಅವರು ಕೂರ್ಮೆಯಿಂದನುಗ್ರಹಿಸಿ ಕೊಟ್ಟ ಕವಚವನ್ನು ಅಕಾಲದಲ್ಲಿಯೂ ಧರಿಸುವೆನು. ಇದಲ್ಲದೆ ಅಣ್ಣನಿಗೂ ಅತ್ತಿಗೆಗೂ ಅವರು ತೊಡಿಗೆಗಳನ್ನು ನನ್ನ ಕೈಯಲ್ಲಿತ್ತರು—

ತೊಟ್ಟನರಿವಾಯೆಯಂ ಮೆ
ಯ್ಯುಟ್ಟಲೊಡಂ ತೋರ್ಪ ಬೆಕ್ಕಸಂ ಗುಡುವಾದಂ ।
ಕಟ್ಟಚ್ಚರಿಯುಂಗುರಮುಂ
ಶೊಟ್ಟಂಕಿತರತ್ನಭೂಷಿತಂ ತಲೆವಣಿಯುಂ ॥ ೮ ॥

ಈಗ ಅಣ್ಣನೆಡೆಗೆ ಹೋಗುವೆನು. (ಹೋಗಿ) ಆರ್ಯನಿಗೆ ಜಯವಾಗಲಿ.

ರಾಮ—(ನೋಡಿ) ಭಾಗ್ಯವಶದಿಂದ ಲಕ್ಷ್ಮಣನು ಅನುಗ್ರಹವನ್ನು ಹೊಂದಿರುವನು. ಲಕ್ಷ್ಮಣ, ಪೂಜ್ಯರಾದ ಆ ಜನರನ್ನು ಕಂಡೆಯಾ?

ಲಕ್ಷ್ಮ—ಪ್ರತ್ಯೇಕವಾಗಿಯೂ ಸಮುದಾಯದಲ್ಲಿಯೂ ಕಂಡೆನು. ಹೇಳಿದಂತೆ ಅವರೊಡನೆ ಬಿನ್ನವಿಸಿದೆನು.

ರಾಮ—(ಮಣೆಯಿಂದೆದ್ದು) ಪರಾಪರವಿದರೇನನ್ನಾಜ್ಞಾಪಿಸುವರು?

ಲಕ್ಷ್ಮ—ಆರ್ಯನೆ, ಕೇಳು—

‘ನೆತ್ತರ್ಬಿಳ್ದುದರಿಂ ನಿಶಾಚರರ ಸಂಧ್ಯಾಮೇಘವರ್ಣಂ ಲಸ
ದ್ವೃತ್ತೋದಾತ್ತನೆ ಒಳ್ಳಿತಲ್ತು ವಿಧಿಗಂ ಗೋದಾವಳೀ ಜೀವನಂ।
ಸತ್ತಾ ದುಷ್ಟರ ಪರ್ವತಾಕೃತಿಯೊಡಲ್ಪಂಬಲ್ಗಳಿಂದೆತ್ತಲುಂ
ಪೆತ್ತಿರ್ಕುಂ ಕಮನೀಯಭೂಮಿತಲಮುಂ ವೈಷಮ್ಯಮಂ ಬಾನಲಂ
॥ ೯ ॥

ಅದರಿಂದ ಕೆಲವು ದಿನಗಳನ್ನಿಲ್ಲಿಯೆ ಇದ್ದು ನಾವು ಭದ್ರಮುಖನನ್ನು ಹರಕೆಗಳಿಂದೇಳ್ಗಿಗೊಳಿಸುವೆವು' ಎಂದರು.

ರಾಮ—ಈ ರಾಶಿ ನಿರ್ಬಂಧಕ್ಕೀಡಲ್ಲ. (ಕುಳಿತುಕೊಳ್ಳುವನು)

ಲಕ್ಷ್ಮ—ಅಣ್ಣನು ಕರುಣಿಸಬೇಕು. (ಆಶ್ಚರ್ಯ ಚೂಡಾಮಣಿಯನ್ನೂ ಅದ್ಭುತಾಂಗುಳೀಯಕವನ್ನೂ ತೋರಿಸುವನು)

ರಾಮ—(ನೋಡಿ ಬೆಕ್ಕಸಂಬಟ್ಟು) ಆಶ್ಚರ್ಯ ! ಆಶ್ಚರ್ಯ !!

ಸೀತೆ—ಅಚ್ಚರಿ ! ಅಚ್ಚರಿ !!

ರಾಮ - ಆ ಮಹಾತ್ಮರಿವುಗಳ ಫಲವೇನೆಂದರು ?

ಲಕ್ಷ್ಮ—ಆರ್ಯನೆ,

ಆರ್ಕದಿರ್ದೊಂಗಲ್ಚೆಂಬೊ
ನ್ನುರ್ಕುವ ಮಣಿಯಂ ಕರಾಂಗುಳೀಯಮುಮಂ ತಾ
ಳ್ದಿರ್ಕುಮೊ ಅವರಂ ಸ್ಪರ್ಶಿಸೆ
ಸೊರ್ಕಿನ ಮಾಯಿಗಳರಂ ಪ್ರಕೃತಿಯಂ ತಳೆಗುಂ || ೧೦ ||

ಎಂದರು. ಅಣ್ಣನು ಕರುಣಿಸಬೇಕು ; ಮಹರ್ಷಿಗಳ ಆಣೆಯನ್ನುಪೇಕ್ಷಿಸಲಾಗದು. (ಮತ್ತೊಮ್ಮೆ ಕೊಡುವನು)

ರಾಮ—ಲಕ್ಷ್ಮಣಾ, ಬ್ರಹ್ಮಾನಂದವನ್ನು ಬಯಸುವ ಋಷಿಗಳು ಕವಚದ ಫಲವೇನೆಂದು ಹೇಳಿದರು ?

ಲಕ್ಷ್ಮ—ಅಂಬುಗಳತ್ತಣಿಂದ ಮರ್ಮಗಳನ್ನು ಕಾವುದೆಂದು.

ರಾಮ—ಹಾಗಾದರೆ ಕೊಡು. ಸಿದ್ಧಾರ್ಥರ ಕೂರ್ಮೆವಳ್ಳಿಯಲರನ್ನು ಸ್ವೀಕರಿಸುವೆನು. (ತೆಗೆದು ಚೂಡಾಮಣಿಯನ್ನು ಸೀತೆಯ ತುರುಬಿನಲ್ಲಿರಿಸಿ ತಾನು ಉಂಗುರವನ್ನು ಧರಿಸುವನು)

ಸೀತೆ—(ಸಂಭ್ರಮದಿಂದ ನೋಡಿ) ಆರ್ಯಪುತ್ರ, ಏನಿದಿನ್ನೊಂದಾಶ್ಚರ್ಯವು ?

ರಾಮ—ಲಕ್ಷ್ಮಣ, ನೋಡು ನೋಡು ಕಾಡಿನ ರೂಪು ಬೇರ್ಪಡುವುದನ್ನು.

ಲಕ್ಷ್ಮ—ಅಣ್ಣ, ನೋಡುತ್ತಿರುವೆನು.

ಆವುದಿದೆತ್ತಣಿನಾದ
ತ್ತಾವನ ಪೆಂಪೊ ಪಳುವಂ ಬೆಳಗಿಕುಂ ಕರನಾ |
ರೋ ವೈದ್ಯುತತೇಜೋಜಾ
ಲಾವೃತತರುಸಾಂದ್ರಮೆಂಬಿನಂ ಚಿಚ್ಚರದಿಂ || ೧೧ ||

(ನೇಪಥ್ಯದಲ್ಲಿ ತರಗೆಲೆಯ ಶಬ್ದವಾಗುವುದು. ಎಲ್ಲರೂ ಚಕಿತರಾಗಿ ನೋಡುವರು)

ರಾಮ—ಜಳವಾಹಂಗಳ ಬಟ್ಟೆಯೊಳ್ಗಡೆವೆಡಂಗಿಂ ಮೇಗೆ
[ ಪಾಯ್ದೊಳ್ಪಿಗ
ರ್ಸ್ಪಳಿಯಿಂ ಸಗ್ಗಿಗರಾಣ್ಮನಂಬುವಣೆಯಂ ಮಾಳ್ಪದ್ಭುತಾ-
[ ಕಾರಮಂ ।
ಚಳರಾಜದ್ರಜತಾಂಘ್ರಿರತ್ನಗಳಹೇಮಾಂಗಂಗಳಂ ದೂರದೊ
ಳ್ತಳೆದೀ ಬಾಲಕುರಂಗಮಂ ಲಲನೆ ನೀಂ ನೋಡೌ
[ ಕುರಂಗೇಕ್ಷಣೇ ॥ ೧೨ ॥

ಸೀತೆ—ನಾಥ, ಅದ್ಭುತ ವಸ್ತುದರ್ಶನದಿಂದ ವನವಾಸದಲ್ಲಿ ಹೆಚ್ಚಿನ ಆನಂದವುಂಟಷ್ಟೆ.

ರಾಮ—ದೇವಿ, ನಿನಗಿದರಲ್ಲಿ ಆದರವುಂಟೇ ?

ಸೀತೆ—ಕಾಂತ, ಅವನ ಆರವೆಯಲ್ಲೀ ಮೃಗವಿರುವುದೋ, ಅವನಿಗೆ ಬೇರೆ ಸಂಪತ್ತುಗಳಿಂದೇನು ?

ರಾಮ—ನನ್ನ ಬಯಕೆಯೂ ಇದೆ.

ಸೀತೆ—ಈ ಹುಲ್ಲೆಯಾರ್ಯಪುತ್ರನ ಕೈಗೆ ಬೀಳುವುದೋ ?

ರಾಮ—ಸಜೀವವಾಗಿ ಹಿಡಿಯಲಾಗದಿದ್ದರೆ ಸರ್ವಾವಯವಗಳಿಂದ ಕೂಡಿದೀ ಮೃಗದ ಚರ್ಮವಾದರೂ ರತ್ನದಿಂದ ಅಧಿಕವೆನಿಸುವುದು.

ಲಕ್ಷ್ಮ—ಅಣ್ಣಾ, ಇದು ರಕ್ಕಸರ ಮಾಯೆಯಾಗಿರಲಾರದೇ?

ರಾಮ—ಎರಡಾದರೂ ಇದರಲ್ಲಿ ಯತ್ನವನ್ನೆಸಗುವುದೊಳ್ಳಿತು.

ಪರಮಾರ್ಥದೊಳೀ ತೋರ್ಪುದು
ಹರಿಣಮೆ ಅಪ್ಪೊಡೆ ಮನೋರಥಂ ಗೊಲೆಗೊಳ್ಗುಂ ।
ಹರಿಣಾಕ್ಷಿಯ ಮೇಣ್ಮಾಯೆಯಾ
ಸುರನಾದೊಡೆ ನಿಕ್ಕುವಂ ಪರೀಕ್ಷಿಸವೇಳ್ಕುಂ ॥ ೧೩ ॥

ಲಕ್ಷ್ಮ—ಅಣ್ಣ ನೆನಗಪ್ಪಣೆಗೊಡಬೇಕು. (ಹೊರಡಲು ಬಯಸುವನು)

ರಾಮ—ತಡೆ. ದೇವಿಯನ್ನು ಕಾವುದೆ ನಿನ್ನ ಅಧಿಕಾರವು. ಅಲ್ಲದೆ,

ಕಾಡೊಳ್ತಿರಿದತ್ತಿತ್ತ
ಲ್ಕೋಡಿ ಮುನೀಂದ್ರರ್ಕಳಂ ನುಡಿದು ಗೆಂಟರೊಳಿ ।
ತ್ತೋಡಿದ ನಿನ್ನಯ ನೊಸಲೊ
ಳ್ಕೂಡಿದಪುದು ಬಾಲ ಘರ್ಮವಾರಿಕದಂಬಂ ॥ ೧೪ ॥

ಲಕ್ಷ್ಮ— ಆಗಲಿ. ನುಡಿದಂತೆ ನಡೆವುದೆ ಗುರುಜನಾನುವೃತ್ತಿಯಷ್ಟೆ.

ರಾಮ—ಲಕ್ಷ್ಮಣ, ಈ ಮೃಗವು ದೂರಹೋಗುವುದರೊಳಗಾಗಿ ಬಿಲ್ಲನ್ನು ತಾ.

ಲಕ್ಷ್ಮ—ಆರ್ಯನಾಣತಿ. ( ಬಿಲ್ಲನ್ನು ತಂದುಕೊಡುವನು )

ರಾಮ—( ಬಿಲ್ಲನ್ನೆತ್ತಿಕೊಂಡು ಹೋಗುವನು )

ಲಕ್ಷ್ಮ—ಕಷ್ಟ! ಈ ಕಜ್ಜದ ಪರಿಣಾಮವು ಒಳ್ಳಿತಲ್ಲ. ಈಗಳೀ ಜಿಂಕೆ-

ಪಲವುಂಸೂಳ್ಪಳಸುತ್ತೆಸಿಂದೆಕೊರಲಂ ರತ್ನಂಗಳಿಂ ಕೆಯ್ದುದಂ
ನೆಲದಿಂ ಮೇಲ್ಪರಿಗುಂ ಸವೀನತೃಣಮುಂ ಜಿಹ್ವಾಗ್ರದಿಂ ಮೆಲ್ಪಿನಂ ।
ಕೆಲದೊಳ್ಸುತ್ತಲು ವೋಡುಗುಂ ಮರಗಳಿರ್ಕುಂ ಬಾನೊಳಂ
[ ಭೂವೊಳಂ
ಕೊಲಲಣ್ಣಂ ಕಿನಿಸಿಂದೆ ಚಾಪಮನರಂ ಕುತ್ತಕ್ಕುಮಂತರ್ಹಿತಂ
॥ ೧೫ ॥

ಅಕ್ಕಟಾ ! ಇನ್ನು ಕಣ್ಣಿಗಣ್ಣನು ಕಾಣಿಸನು.

ಸೀತೆ—ಹಾ ! ಆರ್ಯಪುತ್ರನು ಕಣ್ಬೊಲವನ್ನು ದಾಟಿದನು.

( ಸೂತಶೂರ್ಪಣಖೆಯರೊಡನೆ ರಥವನ್ನೇರಿದ ರಾವಣನು ಪ್ರವೇಶಿಸುವನು)

ರಾವಣ—ಪೊಂದಿದಳೆನ್ನ ಸಹೋದರಿ

ಕುಂದಂ ನರನಿಂ ಬರ್ದುಂಕಿರಾಂ ಬಿಡುಗಳಲಂ ।
ಕೊಂದಾ ರಾಮನನವನೀ
ನಂದನೆಯಂ ಸೆಳೆವೆನಟ್ಟು ಸಾರಥಿ ಹಯಮಂ ॥೧೬॥

ಸೂತ—ಆಯುಷ್ಮಂತನಾಣತಿಯಂತೆ. (ತೇರನ್ನೋಡಿಸುವನು)

ಶೂರ್ಪ—ಅಣ್ಣಾ, ಕೋಪವೇತಕೆ? ಮಹೇಂದ್ರನ ಬಲ್ಮೆಯನ್ನೂ ಗೆಲ್ದ ನಿನಗೆ ಆ ಮಾನಿಸನೆಂತು ಈಡಾಗುವನು? ದುಃಖಾತಿರೇಕದಿಂದ ಪ್ರಾಣವನ್ನು ತೊರೆಯದಂತೆ ಸೀತೆಯನ್ನು ಸ್ವಾಧೀನಪಡಿಸುವಾ. ಅವಳಾದರೊ ರಾಮನ ಜೀವಿತ ಸರ್ವಸ್ವವು.

ಸೂತ—(ಸ್ವಗತ) ದುಷ್ಟಸ್ತ್ರೀಯರು ಪಾಪಕರ್ಮದಲ್ಲಿ ಬಲ್ಲವರನ್ನೂ ಮೀರುವರು.

ರಾವಣ—(ತುಸು ವಿಚಾರಿಸಿ) ಈಕೆಯೆಂದುದು ಯುಕ್ತವು ; ಏಕೆಂದರೆ
ಕೊಳುಗುಳದೊಳಾಂ ಮೃತ್ಯೂಗ್ರಂ ಕೊಂದು ರಾಘವನಂ ಬಸ
ಕ್ಕೆಳಗುವರಿಯುಂ ನೀಡುಂ ತಂದೋಡೆ ಶೋಕದೆ ಸತ್ತಪಳ್ ।
ಬಳರಿಪು ಮುಖೋದ್ದಾಮಾಮರ್ತ್ಯರ್ಕಳಂ ಬಡಿದೊಳ್ದಸಂ
ದಳೆದ ಭುಜಮೆನ್ನೆಂತಸ್ತ್ರಂಗೊಳ್ಗು ಮಿಕ್ಕಲೆ ಮರ್ತ್ಯನಂ ॥ ೧೭ ॥

ಸೂತ—ತನುಕಂಪದಿಂ ಸುರಿವ ಬಾಷ್ಪಧಾರೆಯಿಂ
ಮನದ ವ್ಯವಸ್ಥೆಗಳಿನೆಮ್ಮ ತೇಜಿಗಳ್ ।
ತೊನೆಗುಂ ನಭಃಪದವಿಯಲ್ಲಿ ನಿರ್ನೆರಂ
ದಿನನಾಥ ಸಪ್ತಿಗಧಿಕಂಗಳಾದೊಡಂ ॥ ೧೮ ॥

ರಾವಣ—ಸೂತ, ನಾವೀಗ ರಾಮನ ಪರ್ಣಶಾಲೆಗೆ ಹೋಗಲಿರುವೆವು, ಕೈಲಾಸಕ್ಕಲ್ಲ.

ಸೂತ—ಆಯುಷ್ಮಂತನೆ, ನನ್ನ ಕರ್ತವ್ಯವನ್ನು ಮಾತ್ರ ಮಾಡಿದೆನು. ಇನ್ನು ಮುಂದೆ ಆಯುಷ್ಮಂತನಿಗಿಷ್ಟ ಬಂದಂತಾಗಲಿ. ಇದೊ ಬಿಡುವೆನು (ಸ್ವಗತ) ಮೊದಲು ಸದಾಚಾರವನ್ನು ; ಆಮೇಲೆ ಕಡಿವಾಣವನ್ನು. (ಓಡಿಸುವನು, ಎಲ್ಲರೂ ರಥವೇಗವನ್ನು ನೋಡುವರು) (ಪ್ರಕಾಶ) ಆಯುಷ್ಮಂತನು ತೇರಿನ ಓಟವನ್ನು ನೋಡಬೇಕು.

ನೀರಂ ಕಾರುವ ವಾರಿವಾಹನಿಕರಂ ವಿಸ್ತಾರಮುಂ ತಾಳ್ದುಗುಂ
ತಾರಾರಾವದ ಗಂಟೆಗಳ್ಕಿಡುಕದಾದಂ ಮೋನಮಿರ್ದೊಪ್ಪುಗುಂ ।
ಚಾರೂತ್ತಂಭಿತ ಚಾಮರಂ ಕಿವಿಯೊಳಂ ವಾತಾಹತಂ ಪರ್ಚುಗುಂ
ದೂರೋದ್ದೇಶದ ಪೋಪತಾಣಮಿದಿರೊಳ್ಬರ್ಪಂತೆ ತೋರ್ಕುಂವಲಂ ॥

ಶೂರ್ಪ—ಸೂತನೆಂದುದು ಸತ್ಯವೆ. ಅಣ್ಣಾ, ನಾವೀಗ ರಾಮತಪೋವನವನ್ನೈಯ್ದಿದೆವು.

ರಾವಣ—ನಿನ್ನ ವ್ಯಸನಕ್ಕೆ ಕಾರಣನಾದ ರಾಮನ ಪ್ರಾಣಪ್ರಿಯೆಯೆಲ್ಲಿರುವಳು ?

ಶೂರ್ಪ—ಇದೊ ಇಲ್ಲಿಯೆ ಇರುವಳು. (ಬೆರಲಿಂದ ತೋರಿಸುವಳು)

ರಾವಣ—(ಸೀತೆಯನ್ನು ನೋಡಿ ಆಶ್ಚರ್ಯಗೊಂಡು) ಇವಳೆ ಆ ತ್ರೈಲೋಕ್ಯಸುಂದರಿಯಾದ ಸೀತೆಯೆಂಬವಳು ? ಆಹಾ ! ಆಶ್ಚರ್ಯ !! ಆಶ್ಚರ್ಯ !!!

ಶಚಿಯಂ ದೇವಾಂಗನಾವೃಂದದೊಡನೆ ಸೆರೆಯೊಳ್ಕಟ್ಟಿದೆಂ ಗೆಲ್ದುಪತ್ತಂ
ವಿಚಿತಾಶೋದ್ದೇಶಮಂ ಪುಷ್ಪಕದೊಳಿರಿಸಿದೆಂ ತಂದು ನಲ್ವೆಂಡಿರಂ ಶಂ।
ಭ್ವಚಲಕ್ಕಾಂ ಕಂಪನಂಗೊಟ್ಟೊಡನೆ ಗಿರಿಜೆಯಂ ಕಂಡೆನಳ್ಕಿರ್ದಳಂಪೇ
ಳ್ದಚಕೋರಾಲೋಕೆಯರ್ಗೀ ಪರಿಸೊಬಗನಣಂ ಕಾಣೆನೇನಚ್ಚಿ
ಸಯ್ತೋ ॥ ೨೦ ॥

(ಸಂಕಲ್ಪಾವಸ್ಥೆಯನ್ನು ಹೊಂದಿ) ಈಗಲಾದರೊ

ಕುಡಿದೀ ರೂಪಮರಂದಮಂ ಕುತುಕದಿಂ ಕಣ್ಣೋಳಿಯಾನಂದಮಂ
ಕುಡುತುಂ ಮಾನಸಕೆನ್ನ ಧನ್ಯತಮಮಾಯ್ತುಂತೊಚ್ಚತಂ ಚಂಚಲಂ।
ನಿಡುಮೆಯ್ಯಂ ತಳಿರಂತೆ ನುಣ್ಪಿಡಿದುದಂ ತಳ್ಕಿಯ್ಸುತೀಕಾಂತೆಯಾಂ
ಕುಡುವೆಂ ಬೀರದ ತೋಳ್ಗಳುತ್ಸವ ಮನಿರ್ಪತ್ತರ್ಕಮೆಂದಾಣ್ಮನೆಂ ॥

ಶೂರ್ಪ—(ಸ್ವಗತ) ನನ್ನ ಬಯಕೆ ಸಫಲವಾಯ್ತು.

ರಾವಣ—(ಲಕ್ಷ್ಮಣನನ್ನು ನೋಡಿ) ಇನ್ನೊಬ್ಬನಿವನಾರು ?

ಬಿಲ್ಲಂ ಕಂಚುಕಮಂ ಪುದುಂಗೊಳಿಸಿ ಕೆಯ್ಮೆಯ್ಬೆನ್ನೊಳಾವಾಪಮಂ
ಕಲ್ಲಂತಾವನಿವಂ ಯುವಾನ ನದಟಿಂ ನಿಂತಂ ಕೆಲಕ್ಕೀಕೆಯಾ ।

ಶೂರ್ಪ—(ಕಿವಿಯಲ್ಲಿ) ಇಂತಿಂತು.

ರಾವಣ—ಬಲ್ಲಂ ತಾಟಕೆಯಂ ಹಹಾ ಕಣೆಗಳಿಂ ಕೊಂದಂ ಗಡಾ
ರಾಘವಂ
ನಿಲ್ಲಂ ನಿನ್ನೊಳಮಿಾತನಿಕ್ಕದಸಿಯಂ ಹಾ ಮಾನಿಸರ್ಗಂಡರೇ ॥೨೨॥

(ನೇಪಥ್ಯದಲ್ಲಿ ತರಗೆಲೆಯ ಶಬ್ದವು ಕೇಳಿಸುವುದು.)

(ನೇಪಥ್ಯದಲ್ಲಿ) ಆಹಾ ! ಎಂತಹ ಓಟವು !

ಸೀತೆ—ಈಗಳೂ ಆರ್ಯಪುತ್ರನು ಹುಲ್ಲೆಯ ಹಿಂದೋಡುತ್ತಿರುವನು.

ರಾವಣ—ಇದಾರ ದನಿ ?

ಶೂರ್ಪ—ಅಣ್ಣ, ಆ ರಾಮನ.

ರಾವಣ—(ಹಿಂದಿರುಗಿ ನೋಡಿ) ಇವನೆ ತಪಸ್ವಿಯಾದ ರಾಮನು ! (ಎಂದು ಮೂರ್ಛೆ ಹೋಗುವನು)

ಸೂತ—(ಸ್ವಗತ) ಮಾರೀಚನ ಮಾತು ಹುಸಿಯಲ್ಲ. ರಾಮನೆಂದರೆ-

ತಿರೆಗೆ ನರಾಕೃತಿಯಿಂದಿಳಿ
ದ ರಮೇಶಂ ಮೇಣುಮೇಶನಲ್ಲಾಯೋಧ್ಯಾ ।
ಪುರದೊಳ್ಪೊಣ್ಮಿದ ರಕ್ಷೋ
ಹರ ಮೆನಿಪೊಂದತುಲಭೇಷಜಂ ದಿಟಮಕ್ಕುಂ || ೨೩ ||

ಎಂಬುದು.

ರಾವಣ—(ಸೂತನನ್ನು ನೋಡಿ) ಸೂತ, ನಿನ್ನ ಮೋರೆಯನ್ನು ನೋಡಿದರೆ ಹೆದರಿದವನಂತೆ ಕಾಣುವೆ.

ಸೂತ—ಆಯುಷ್ಮಂತನೆ, ಸತ್ಯವಾಗಿ ನಾನು ಭಯಗೊಂಡವನೇ. ಈಗ ನಾವು ಮನುಷ್ಯರು ರಾಮನು ರಕ್ಷಸನೆಂಬಂತಿದೆ.

ಶೂರ್ಪ—ಅಣ್ಣಾ, ಈಕೆಯ ಈ ರೂಪು ಬೆಳಗುವ ಪೊಂದೊಡಿಗೆಗಳಿಂದೆಂತು ಶೋಭಿಸುವುದೋ !

ರಾವಣ—ಇವಳಿಗಾಭರಣಗಳೇತಕ್ಕೆ ? ನೋಡು

ಸಾಜದಿನಾವುದು ಕಾಂತಿಗೆ
ಭಾಜನ ಮಾದತ್ತದರ್ಕೆ ಕೆಯ್ಗೆಯ್ತುಂ ಬೇ ।
ಡಾ ಜೈವಾತೃಕಕಳೆಯಂ
ರಾಜಿಪ ಕೌಸ್ತುಭಕೆ ತೊಡೆದರಣ್ಪೆಕ್ಕಿದರಾರ್ || ೨೪ ||

ಸೂತ—ಆಯುಷ್ಮಂತನೆ, ಒಂದಿಷ್ಟು ಹೇಳಲು ಬಯಸುವೆನು.

ರಾವಣ—ಹೇಳು. ನಿನಗೇನು ತಡೆ?

ಸೂತ—ಪತಿದೇವತೆಯಂ ಕಂಡಪೆ
ನತಿವಿಮಲಚರಿತ್ರಳಪ್ಪ ಸೀತೆಯನೆಂದುಂ।

ರಾವಣ—ನೀನವನ್ನೆಂತರಿವೆ?

ಸೂತ—ಧೃತಿಯಿಂ ಬಿಟ್ಟಳ್ತಿಗರಂ
ವ್ರತಮಂ ಪತಿಯೊಡನೆ ಕಾಡೊಳಾಳ್ಗಂ ಸೊಗದಿಂ ॥ ೨೫ ॥

ರಾವಣ—ಮೂಢಾ, ವಿಶೇಷ ವಸ್ತುಗಳನ್ನು ಪಡೆದು ಹೆಣ್ಣುಗಳ ಬಗೆ ಸಂತಸಬಡುವುದು ಸಾಜವಷ್ಟೆ. ನೋಡು—

ಮರಕತತೀರದೊಳ್ಗಗನಸಿಂಧುವಿನೆನ್ನಡರ್ದಂಕವಮಂ ಸುವ
ರ್ಣರುಚಿರಪದ್ಮಸೌರಭಮನಾಂತ ಸುರಾಲಯಶೀತವಾತಮಂ।
ಹರಿಸದೊಳೀಂಟಿ ಬೀರುತೆ ಕಟಾಕ್ಷಮನಿಂದ್ರನಳರ್ದ ನಲ್ಲೆಯೊ
ಳ್ಸರನ ನಿವಳ್ದಲಟ್ಟೆ ಸೊಗದೆನ್ನೊಡನುಣ್ಬಳನಂತ ಭೋಗಮಂ ॥೨೬॥

ಸೀತೆ—(ದುರ್ನಿಮಿತ್ತವನ್ನು ಸೂಚಿಸುತ್ತ) ಕುಮಾರ, ಈಗ ನನ್ನ ಬಲಗಣ್ಣು ಬೇಗನೆ ಸಂಭವಿಸಲಿರುವ ಅಮಂಗಲವನ್ನು ಹೇಳುತ್ತಿದೆ.

ಲಕ್ಷ್ಮ—ತಾಯೇ,

ದಾಯಾದರಿಚ್ಛೆಪರ್ಥಮ
ನೀಯದ ಬನದೊಳಗೆ ಬಾಳ್ವ ಜನಕೆಂತಶುಭಂ।
ಶ್ರೀಯೆಲ್ಲಿರ್ಪುದೊ ಅಲ್ಲಿಯೆ
ಮಾಯಾವಿಗಳಿರ್ಪರಂತೆ ಶತ್ರುಗಳಾದಂ ॥ ೨೭ ॥

ಸೀತೆ—ಕುಮಾರ, ನೀವಿಬ್ಬರು ಕೊಂದ ಖರದೂಷಣರಣ್ಣನಾದ ಇಪ್ಪತ್ತುತೋಳುಗಳುಳ್ಳವನೊಬ್ಬನು ಪ್ರಸಿದ್ಧನಾಗಿರುವನೆಂದು ರಿಸಿವೆಂಡಿರ ಬಾಯಿಂದ ನಾನು ಕೇಳಿರುವೆನು.

ರಾವಣ—ಭಾಗ್ಯವಶದಿಂದ ನನ್ನನ್ನೀಕೆ ಮೊದಲೆ ಕೇಳಿರುವಳು.

ಲಕ್ಷ್ಮ—ತಾಯೇ, ಅವನತ್ತಣಿಂದ ಹೆದರಿಕೆಯನ್ನು ಬಿಡು.

ರಾವಣ—ಈತನೇನನ್ನು ಹೇಳುವನೋ?

ಲಕ್ಷ್ಮ—ತೋಳುಗಳು ಪೌರುಷಕ್ಕೆ ಪ್ರಮಾಣವಲ್ಲ. ನೋಡು

ಈ ರಾವಣನಂ ಗೆಲ್ದ ವು
ಹಾರಥ ಸಾಹಸ್ರಬಾಹುವುಮನರ್ಜುನನಂ ।
ಭೂರುಹವುಂ ಕಡಿವಂತೆ ತ
ಪೋರತನುರುಪರಶುವಿಂ ತರಿದನೊರ್ವಂ ತಾಂ ॥ ೨೮ ॥

ರಾವಣ—ಮಾನಿಸಾ, ನಿನ್ನೀ ನುಡಿಯನ್ನು ಮರೆಯದಿರು.

(ನೇಪಥ್ಯದಲ್ಲಿ) ಅಯ್ಯೋ! ಲಕ್ಷ್ಮಣಾ!!

ಸೀತೆ—ಹೌದು! ಆರ್ಯಪುತ್ರನ ದನಿಯಂತಿದೆ.

ಲಕ್ಷ್ಮ—ತಾಯೇ, ಅಣ್ಣನೇನು ಮೊರೆಯಿಡುವನೇ?

ಸೀತೆ—ಏನೆಂದು ನೀನೂಹಿಸುವೆ?

ಲಕ್ಷ್ಮ—ಮಾಯೆಯೆಂದು.

ರಾವಣ—ಓಹೋ! ಈತನು ಬಲುದಿಟ್ಟನು.

ಸೀತೆ—ಮೂಢಾ, ಅದರ ದೆಸೆಯಿಂದಾದರೂ ಅವನನ್ನು ಕಾಯ ಬೇಕಲ್ಲವೆ?

ಲಕ್ಷ್ಮ— ರಕ್ಷ್ಯನೆಂತು ರಕ್ಷಿಸುವನು?

(ನೇಪಥ್ಯದಲ್ಲಿ) ಏಕೆ ತಡಮಾಡುವೆ?

ಸೀತೆ—ದುಷ್ಟ, ಆಪತ್ತಿಗೀಡಾದ ಅಣ್ಣನ ಮೊರೆಯನ್ನು ಕಡೆಗಣಿಸುವ ನಿನ್ನನ್ನೆಂತು ಭೂದೇವಿ ಹೊರುವಳೋ!

ಲಕ್ಷ್ಮ—ತಾಯೇ, ನೀನು ಹಾಗೆಯೆ ನಿರ್ಧಾರಿಸಿರುವೆಯಾ?

(ನೇಪಥ್ಯದಲ್ಲಿ) ಲಕ್ಷ್ಮಣಾ! ನೀನೇನು ಕೇಳುವುದಿಲ್ಲವೇ?

ಸೀತೆ—ಲಕ್ಷ್ಮಣಾ, ಕೇಳು. ಏಕೆ ತುರಿಪಗೊಳ್ಳುವುದಿಲ್ಲ? ಹೆಣ್ಣುಗಳಲ್ಲಿ ಸಿರಿಯೆ ಬೇರೆಯವರನ್ನು ಸೇರುವಳು; ನಾನೆಂದೂ ಅಲ್ಲ; ಅವನನ್ನೊಬ್ಬನನ್ನೆ.

ಲಕ್ಷ್ಮ—(ಕಿವಿಗಳನ್ನು ಮುಚ್ಚಿ) ಅಯ್ಯೋ! ಪಾಪವು ಶಾಂತವಾಗಲಿ, ಶಾಂತವಾಗಲಿ.

ಮತಿವಂತರೊಳ್ಪ್ರಥಮಳಾದೊಡನಿ
ಕ್ಕುತೆ ಜ್ಞಾನಮುಂ ಪಳಿದೆ ಎನ್ನುವು ನೀ !
ಕತದಿಂ ವಿಪತ್ತು ನಿನಗಕ್ಕುಮರಂ
ಗತಿದಪ್ಪುಗುಂ ಪ್ರಕೃತಿ ಸಂಕಟದೊಳ್ ||೨೯||

ರಾವಣ—ಮೂಢ, ವನವಾಸದಿಂದ ಬೇಸತ್ತೀಕೆಗೆ ಐಸಿರಿಯೊದವಿದೆಯೆಂದು ನೀನರಿಯೆ.

(ನೇಪಥ್ಯದಲ್ಲಿ) ಅಯ್ಯೋ! ಸತ್ತೆನು.

ಸೀತೆ—ಮೂರ್ಖ, ಕೇಳು ಲಕ್ಷ್ಮಣಾ; ನಿನ್ನಿದಿರಲ್ಲಿಯೆ ನಾನು ಸಾವೆನು; ಆ ಬಳಿಕ ನಿರಾಶನಾಗಿ ನೀನಣ್ಣನ ಬಳಿಗೆ ಹೋಗುವೆ.

ಲಕ್ಷ್ಮ—ಎನ್ನೊಡನವಿವೇಕದೊಳಂ
ಮುನ್ನೋಟಮನುಳಿದುದಾರತೆಯುಮಂ ದಾಕ್ಷಿ।
ಣ್ಯೋನ್ನತಿಯಂ ನೀನಿಂತೆಂ
ದನ್ನೆಯದಿಂ ಪೆಣ್ಣ ಜನ್ಮಮಂ ಸುಡು ನೀಡುಂ || ೩೦ ||

ಸೀತೆ—ನೀನಾದರೂ ಒಳ್ಳಿದನಾಗು.

ಲಕ್ಷ್ಮ—ಮಾಯಾರೂಪದ ನವವ್ಯೆ
ರಾಯಣ ರಾಕ್ಷಸರ ಕಾಡೊಳೊರ್ವಳನುಳಿದಾಂ।
ಕಾಯದೆ ಸೋದರನಾಣೆಯ
ನಾಯಾಸಂಬಡುವ ನಿನ್ನನೆಂತುಟು ಪೋಪೆಂ || ೩೧ ||

ಸೀತೆ—ಹೆಂಗುಸರನ್ನು ಪಾತಿವ್ರತ್ಯವೆ ಕಾವುದು; ಬಾಣಗಳಲ್ಲ.

ಲಕ್ಷ್ಮ—ದೇವರೆ ಅರಿವರು; ದೇವರೆ ಸಾಕ್ಷಿಗಳು.

ಸೀತೆ—ಹಾಗಾಗಬೇಕು.

ಲಕ್ಷ್ಮ—(ಪೊಡಮಟ್ಟು) ನಿನಗೆರಗುವೆನು. (ಹೋಗುವನು)

ಶೂರ್ಪ—ಅಣ್ಣ, ನೋಡು, ನೋಡು.

ಸೀತೆ—ಹಾ ದೈವವೇ, ಲಕ್ಷ್ಮಣನು ಪತಿದೇವನಿಗೆ ನೆರವಾಗಲಿ.

(ನೇಪಥ್ಯದಲ್ಲಿ) ಸೀತೇ, ನೀನೂ ನನ್ನನ್ನು ಉಪೇಕ್ಷಿಸುವೆಯಾ?

ಸೀತೆ—ಹಾ! ಭಾಗ್ಯಹೀನೆಯಾದ ನಾನು ದನಿಯ ಗುರುತಿನಿಂದ ನಾಥನನ್ನರಸುವೆನು. (ಹೊರಡುವಳು)

ಶೂರ್ಪ—ಅಣ್ಣ, ನೋಡು ನೋಡು. ತೊಡರನ್ನು ತೊರೆದ ರನ್ನವು ತಾನಾಗಿ ಬರುತ್ತಿದೆ.

ರಾವಣ—ಈ ಸುಯೋಗವನ್ನು ಬಿಡಲಾಗದು. ರಾಮನ ರೂಪಿನಿಂದರೆ ದಾರಿಯಲ್ಲಿ ಈಕೆಯನ್ನು ತಡೆವೆನು.

ಶೂರ್ಪ–ಅಣ್ಣನೆಂದುದು ಚೆನ್ನಾಯ್ತು. ನಾನೂ ಸೀತಾರೂಪದಿಂದ ಹಿಂದಿರುಗುವ ದಾರಿಯಲ್ಲಿ ರಾಮನನ್ನು ತಡೆದು ನಿಲ್ಲಿಸುವೆನು.

ರಾವಣ—ಲೇಸು, ಲೇಸು.

ಶೂರ್ಪ—ನಾನಿದರಿಂದ ಹೆಚ್ಚೇನನ್ನು ಮಾಡಬೇಕು? (ಹೋಗುವಳು)

ಸೂತ—ಆಯುಷ್ಮಂತನೆ, ನಾನೀಗ ಮಾಡತಕ್ಕುದೇನು?

ರಾವಣ—(ಕಿವಿಯಲ್ಲಿ) ಇಂತಿಂತು.

ಸೂತ—ಆಯುಷ್ಮಂತನಾಜ್ಞೆಯಂತೆ. (ಸ್ವಗತ) ಹಾ! ಒಡೆಯನ ಉಪ್ಪೆಷ್ಟು ದೊಡ್ಡಿತು! ಇದೂ ನನ್ನಿಂದಾಗಬೇಕಾಗಿದೆ.

(ರಾವಣನು ರಥದಿಂದಿಳಿದು ರಾಮರೂಪದಿಂದ ಸೀತೆಯ ಇದಿರಲ್ಲಿ ನಿಲ್ಲುವನು)

ಸೀತೆ—ಓಹೋ! ಆರ್ಯಪುತ್ರನು! ಆರ್ಯಪುತ್ರನಿಗೆ 'ಜಯವಾಗಲಿ.

ರಾವಣ—ದೇವಿ, ಇತ್ತ ಬಾ.

ಬಲವದ್ರಾಕ್ಷಸ ಜಿಹ್ವಾ
ತಲದೊಳ್ಸಂದಿರ್ಪ ನಿನ್ನನೆಂತುಟುತೊರೆದಂ।
ಲಲನೇ ಲಕ್ಷ್ಮಣನೇಕಿ
ತ್ತಲದೀಪರಿ ಕಾಂತೆ ಬಂದೆ ಮೆಲ್ಲಡಿಯಿಂದಂ || ೩೨ ||

ಸೀತೆ—ಆಹಾ ! ಅಧನ್ಯಳಾದ ನನ್ನಿಂದ ಬಯ್ಯುಳನ್ನು ಪಡೆದ ಕುಮಾರನೇನನ್ನು ಹೇಳುವನೋ !

ರಾವಣ–ಕವಡುಹುಲ್ಲೆಯ ದನಿಯಿಂದ ನೀನು ದಿಟವಾಗಿ ವಂಚಿತಳಾದೆ.

ಸೀತೆ—ನಾಥ, ಆ ಕಪಟ ಮೃಗವೆಲ್ಲಿ ?

ರಾವಣ—ದಾರಿಯಲ್ಲಿ ಮಾಯವಾಯ್ತು ; ತಾನಾಗಿ ಬರುವುದು. (ನೇಪಥ್ಯದಲ್ಲಿ) ಇದೊ ಬಂದೆನು, ಬಂದೆನು.

ಸೀತೆ—ಹೂಂ, ಆರ್ಯಪುತ್ರನ ಸ್ವರದಂತಿದೆ.

ರಾವಣ – ಮೊದಲೂ ಸ್ವರಸಾದೃಶ್ಯದಿಂದ ನೀನು ವಂಚಿತಳಾದೆಯೆಂದು ಭಾವಿಸುವೆನು.

ಸೀತೆ—ಅದರಿಂದ ಕುಮಾರನನ್ನೂ ಬಯ್ದೆನು.

(ರಾವಣನು ಸೂತನನ್ನು ನೋಡುವನು. ಸೂತನೂ ಲಕ್ಷ್ಮಣರೂಪದಿಂದ ಸಂದೇಹವಿಲ್ಲದೆ ರಥವನ್ನು ರಾವಣನ ಬಳಿಗೆ ತರುವನು)

ಸೂತ—ಅಣ್ಣನು ದಯೆದೋರಬೇಕು. ಪತ್ನಿಯೊಡನೆ ಅಣ್ಣನು ತೇರನ್ನಡರಬೇಕು.

ರಾವಣ—ಲಕ್ಷ್ಮಣಾ, ಏನಿದು ?

ಸೂತ—ಅಣ್ಣ, ತಪಸ್ವಿಗಳು ಜ್ಞಾನಗಣ್ಣಿನಿಂದ ಭರತನಿಗುಂಟಾದ ಶತ್ರುಭಯವನ್ನು ನೋಡಿ, ನೀವು ಶೀಘ್ರವಾಗಿ ಅವನಿಗೆ ನೆರವಾಗಲು ಹೋಗಬೇಕೆಂದು ತಪೋಬಲದಿಂದ ತೇರನ್ನು ಸಮೆದು ನನಗಿತ್ತು ಕಾಡಿನಲ್ಲಿ ಕಣ್ಮರೆಯಾದರು.

ಸೀತೆ - [ಸ್ವಗತ] ಯುಕ್ತವಿದು. ಮೊದಲೂ ಈತನ ಕೆಯ್ಯಲ್ಲಿಯೆ ಆಶ್ಚರ್ಯ ಚೂಡಾಮಣಿಯನ್ನೂ ಅದ್ಭುತಾಂಗುಳೀಯಕವನ್ನೂ ಇತ್ತರು.

ರಾವಣ – ದೇವಿ, ನಿನ್ನ ಅಭಿಪ್ರಾಯವಾವುದು ?

ಸೀತೆ—ಭರತನ ವಿಪತ್ತು ಅಳಿಯಬೇಕು, ಹಿರಿಯರಿಗೆರಗಬೇಕು. ಇದೆ ನನ್ನ ಹಿರಿಯಾಸೆ.

ರಾವಣ—ಲಕ್ಷ್ಮಣ, ಮೊದಲು ದೇವಿಯನ್ನು ರಥವನ್ನೇರಿಸಿ.

ಸೂತ—ಆರ್ಯನಾಣತಿ. [ರಥವನ್ನೇರಿಸುವನು]

ಸೀತೆ—ದೈವವಶದಿಂದ ರಕ್ಕಸರ ವಂಚನೆಯಿಂದ ಬಿಡುಗಡೆ ಹೊಂದಿದವರಾಗಿ ಹೋಗುವಾ. (ಮುದದಿಂದೇರುವಳು)

ರಾವಣ—ಲಕ್ಷ್ಮಣ, ದೇವಿ ಸಂತುಷ್ಟಳಾಗಿರುವಳು. ಕುದುರೆಗಳನ್ನು ತ್ವರೆಯಿಂದೋಡಿಸು.

ಸೂತ—ಅಣ್ಣನಪ್ಪಣೆಯಂತೆ.

ರಾವಣ—(ಸ್ವಗತ)

ರಾಮನೆನಾನೆಂಬುದರೊ
ಳ್ಕಾಮಿನಿಗಣಮಿಲ್ಲದಿರ್ದೊಡಂ ಸಂದೆಯುಮಾಂ।
ವಾಮೆಯನಾರೆಂ ಮುಟ್ಟಲ್
ಹ್ರೀಮತಿಯರ ಪೂರ್ವಸಂಗಮುದು ಕಷ್ಟಂದಲ್ ॥ ೩೩ ॥

(ಆ ಮೇಲೆ ಸೀತಾರೂಪವನ್ನು ಧರಿಸಿದ ಶೂರ್ಪಣಖೆಯೊಡನೆ ರಾಮನು ಪ್ರವೇಶಿಸುವನು)

ರಾಮ—ದೇವಿ, ಆ ನೀಚ ರಾಕ್ಷಸನು ನನ್ನ ಬಾಣವು ಬಿದ್ದೊಡನೆ ನನ್ನ ರೂಪನ್ನು ತಾಳಿ ಬಿದ್ದನು. ಮತ್ತೆ ನಾನವನನ್ನು ಬಿಟ್ಟು ನಿನ್ನ ವೃತ್ತಾಂತವನ್ನರಿಯಲು ಬೇಗನೆ ಹಿಂಜರಿದೆನು.

ಶೂರ್ಪ—(ಸ್ವಗತ) ದೇವೀ ಶಬ್ದವು ನಿನ್ನ ಮಹಾ ಪಾತಕವು.

ಆಕಾಶದಲ್ಲಿ ರಥದಲ್ಲಿ ಕುಳಿತ ಸೀತೆ—ಬಹುಕಾಲ ಕೆಳದಿಯಾದ ವನಸ್ಥಲಿಯನ್ನು ತೊರೆದು ನಾವೀಗ ಹೋಗಬೇಕಾಗಿದೆ.

ರಾವಣ—ದೇವಿ, ಅದಂತಿರಲಿ. ನಂದನವನ್ನೂ ಮೀರುವ ಹೊಳಲ ಉಪವನದ ಸೊಬಗನ್ನೆ ನೀನು ಬೇಗನೆ ನೋಡುವೆ.

ಸೀತೆ—(ಕೆಳಗೆ ನೋಡಿ) ಹೌದು. ಓಹೋ ಆರ್ಯಪುತ್ರನು!

ರಾಮ—ಬಾನಿನಲ್ಲಿ ಸೀತೆಯ ದನಿಯಂತೆ ಕೇಳಿಸುವುದು. (ಎಂದು ಮೇಗೆ ನೋಡುವನು)

ಶೂರ್ಪ—ನಾಥ, ನೋಡು, ನೋಡು. ಕನ್ನಡಿಯಲ್ಲಿಂತೊ ಅಂತೆ ನಿನ್ನ ಪ್ರತಿರೂಪನ್ನೂ ನನ್ನ ಆಕೃತಿಯ ಹೆಣ್ಣನ್ನೂ ನೋಡುವೆನು.

ರಾಮ—ಸತ್ಯವಾಗಿ ಸೀತೆ ಪರಪುರುಷರಿದುರಲ್ಲಿ ನಿಲ್ಲಲಾರಳು. ದಿಟವಾಗಿ ಈಕೆ ಮಾಯಾರಾಮನ ಕೆಲದಲ್ಲಿ ಕಪಟ ಸೀತೆ. ಅವನೆಂತು ನಾನಲ್ಲವೋ ಅಂತೆ ಸೀತೆಯೂ ಅಲ್ಲ.

ಸೀತೆ—ಆಹಾ! ಭಾಗ್ಯಹೀನೆಯಾದ ನಾನು ಸತ್ಯವಾದ ನಾಥನನ್ನು ಅರಿಯೆನು.

ರಾವಣ—ಮುಗ್ಧೆ, ಮುನಿಗಳನ್ನು ವಂಚಿಸಲ್ಕೆ ನನ್ನ ರೂಪಿಂದ ರಕ್ಕಸರು ತಿರುಗುವರು.

ಸೀತೆ—ಇದು ಸತ್ಯವೆ. ಆರ್ಯಪುತ್ರನಿಗೆ ಸ್ತ್ರೀಸಂಬಂಧವೆಂತು? ಅವಳೆಂತು ನಾನಲ್ಲವೋ, ಅಂತೆ ಆರ್ಯಪುತ್ರನೂ ಅವನಲ್ಲ.

ರಾವಣ—ಲಕ್ಷ್ಮಣ, ದೇವಿ ಸಂತುಷ್ಟಳಾಗಿರುವಳು. ವಾರುವಗಳನ್ನು ತ್ವರೆಯಿಂದೋಡಿಸು.

ಸೂತ—ಆರ್ಯನಾಣತಿಯಂತೆ.

(ಸೀತೆಯನ್ನು ಹಿಡಿದುಕೊಂಡು ಸೂತನೊಡನೆ ರಾವಣನು ಹೋಗುವನು.)

ಶೂರ್ಪ—(ದುಃಖವನ್ನು ತೋರುವಳು. ಸ್ವಗತ) ಇಲ್ಲಿಂದ ತೆರಳುವ ಉಪಾಯವಾದರೊ ಆವುದು?

ರಾಮ—ದೇವಿ,

ಬಿಸುಸುಯ್ಲಿಂ ತವೆ ನೀಂ ಜಪಾರುಣಮನೇತರ್ಕೋಷ್ಠಮಂ ಶೋಷಿಪೌ
ಬಿಸಜಾಕ್ಷಿದ್ವಯದಿಂದ ಮೇಕೆ ಸುರಿಪೌವಕ್ಷೋಜದೊಳ್ಬಾಷ್ಪಮಂ।
ಬಸಗೆಟ್ಟೇಕೆ ವಿಷಾದಿಪೌ ಉಸಿಕನಿಂತಿರ್ಪೌಕರಂ ಜಾನದಿಂ
ದಸಮಾನೋತ್ಸವೆ ನಿನ್ನ ಧೈರ್ಯಮನಿತುಂಪೋದತ್ತದೆತ್ತಲ್ಸತೀ ||೩೪||

ಶೂರ್ಪ—ಆರ್ಯಪುತ್ರಾ, ನಿನ್ನಾಯಾಸಕ್ಕೆ ನಾನು ಕಾರಣಳಾದೆನಲ್ಲಾ ಎಂದು ಚಿಂತಿಸುವೆನು.

ರಾಮ—ಹಾಗೆನ್ನಬೇಡ. ಆ ಮಾಯಾಮೃಗವಾರನ್ನು ತಾನೆ ಮರುಳುಗೊಳಿಸದು? ಏಕೆ ಲಕ್ಷ್ಮಣನಿನ್ನೂ ಹಿಂದೆ ಬಂದಿಲ್ಲ?

ಶೂರ್ಪ—ನಾನೂ ಅದನ್ನೆ ಚಿಂತಿಸುವೆನು.

ರಾಮ—ಮೃಗದ ರೂಪುಪಲ್ಲಟದಿಂದ ತಮ್ಮನು ಮೋಸಗೊಂಡನೆಂದೂಹಿಸುವೆನು. ದೇವಿ, ಲಕ್ಷ್ಮಣನನ್ನರಸುವಾಗ ನಿನಗೆ ನನ್ನನ್ನು ಹಿಂಬಾಲಿಸಲು ಸಾಧ್ಯವೇ?

ಶೂರ್ಪ—ಹೇಗಾದರೂ ಹಿಂಬಾಲಿಸುವೆನು. ರಕ್ಕಸರ ಮಾಯೆಗೆ ಹೆದರುವೆನು.

ರಾಮ—ದೇವಿ, ಇತ್ತ ಬಾ. (ಇಬ್ಬರೂ ನಡೆವರು)

(ನೇಪಥ್ಯದಲ್ಲಿ)

ಸಂದತ್ತು ನಿನ್ನ ಕೈಕಯಿ
ಇಂದಿಷ್ಟಂ ಗತಿ ನಿನತ್ತು ಕೌಸಲೆ ಪೋಯ್ತೆಂ।
ತೆಂದೊಡೆ ನಿನ್ನಯ ಪುತ್ರಂ
ಪೊಂದಿದನಿದೊ ರಕ್ಕಸಂಬುವಿಂ ನೊಂದೆರ್ದೆಯೊಳ್ ॥೩೫॥

ರಾಮ—ಕಷ್ಟ! ಅದೇ ಆಯ್ತು.

(ಮತ್ತೂ ನೇಪಥ್ಯದಲ್ಲಿ)

ಅರನಂ ನನ್ನಿಯನಾಂತಳೆ
ಧರಣೀದೇವಿಯ ಸುಪುತ್ರಿ ಮಂಗಳೆ ದೇವೀ।
ಅರಿವೆನ ದೆಂತಾಂ ನಿನ್ನಂ
ಪರಿಗಣಿಸೆಯ ಮಂಗಳಾಂಗನೆಯರೋಳಿಯೊಳಂ ॥೩೬॥

ರಾಮ—ಈತನು ಆತ್ಮತ್ಯಾಗವನ್ನು ಗೆಯ್ಯುವುದರೊಳಗೆ ನಾನವನ ಬಳಿಗೆ ಹೋಗುವೆನು.

(ಬಾಣವನ್ನೆಳೆಯಲೆಳಸುವ ಲಕ್ಷ್ಮಣನು ಪ್ರವೇಶಿಸುವನು. ರಾಮರೂಪಿನ ಮಾರೀಚನ ದೇಹವು ಬಿದ್ದಿರುವುದು)

ಲಕ್ಷ್ಮ—(ದೈನ್ಯದಿಂದ) ಆರ್ಯ, ತಂಪೆವಿರಾಣತಿಯನ್ನು ಪಾಲಿಸುವವನೇ, ನಿನ್ನ ವಶದಲ್ಲಿರುವ ನನ್ನ ಹರಣವನ್ನೊಯ್ಯುವೆ.

ರಾಮ—(ಮುಗುಳ್ನಗೆಯಿಂದ) ಲಕ್ಷ್ಮಣಾ,

ಬಿಡು ರಾಕ್ಷಸ ಜಾಳದೆ ಸಂ
ಗಡಿಸಿದಳಲನೆನ್ನನಣ್ಣನಂ ನೋಡೈ ನೀಂ ।

ಲಕ್ಷ್ಮ—(ಕಂಡು ಕೋಪದಿಂದ) ಆಃ! ರಕ್ಕಸಾ

ಕಿಡಿಸಿಸಹೋದರನಂ ನೀ
ನೆಡೆಗೆನ್ನಲು ಬಂದೆ ಅಲ್ತೆ ಸಾಹಸದಿಂದಂ ॥೩೭॥

ನಿಲ್ಲು, ನಿಲ್ಲು. ಎತ್ತ ಹೋಗುವೆ? (ಅಸಿಯನ್ನೊರೆಯಿಂದೆಳೆವನು)

ರಾಮ—(ಸಮೀಪಕ್ಕೆ ಹೋಗಿ) ಲಕ್ಷ್ಮಣ, ನೋಡು ನೋಡು. (ಎಂದುಂಗುರವನ್ನು ತೋರಿಸುವನು)

ಲಕ್ಷ್ಮ—(ನೋಡಿ ನಾಣ್ಚಿ ಸ್ವಗತ) ರಕ್ಕಸರಿದನ್ನರಿಯರು.
(ವೋರೆಯನ್ನು ಬಗ್ಗಿಸುವನು)

ರಾಮ—ಲಕ್ಷ್ಮಣ, ಉಂಗುರದ ಪ್ರಯೋಜನವನ್ನು ನೋಡು.

(ಮಾರೀಚನನ್ನು ಕಾಲಿಂದೆತ್ತಿ ಬಿಸುಡುವನು. ಮಾರೀಚನು ತನ್ನ ರೂಪನ್ನು ಹೊಂದುವನು)

ಲಕ್ಷ್ಮ—ಅಣ್ಣ, ನೋಡುತ್ತಿರುವೆನು.

ನಿನ್ನೊದೆಯಿಂ ಮೇಲ್ವಾಯ್ದು ಖ
ಳಂ ನಿಜರೂಪಮುನೆ ಪೊಂದಿ ಮುಗಿಲೊಡ್ಡುಗಳಿಂ ।
ಬಿನ್ನನೆ ಕೂಡುತೆ ಬೆಟ್ಟುಗ
ಳಂ ನೆಗ್ಗುತೆ ಜವದೆ ಬೀಳ್ಗುಮೆಳೆಯೊಳ್ಬಾನಿಂ ॥೩೮॥

ಶೂರ್ಪ—(ದುಗುಡದಿಂದ, ಸ್ವಗತ) ಹುಂ, ಮನುಷ್ಯರು ಬಲಿಷ್ಠರಪ್ಪಾ! ಅಕ್ಕಟಾ! ಮಾವನಾದ ಮಾರೀಚನನ್ನು ಕೊಂದರು.

ಲಕ್ಷ್ಮ - ರಾಕ್ಷಸ ಸಂದೇಹದಲ್ಲಿ ನಿಜವಾದ ರೂಪನ್ನು ಉಂಗುರವು ತೋರುವುದೆಂದು ಇದನ್ನು ನೋಡಿದುದರಿಂದ ನಮಗೆ ನಂಬುಗೆ ಬಂದಿತು.

ಶೂರ್ಪ—ಆವುದೀಗ ನನಗಿಲ್ಲಿಂದ ತೆರಳುವ ಉಪಾಯವು?
(ವಿಷಾದವನ್ನು ತೋರುವಳು)

ರಾಮ—ದೇವಿ, ಏಕೆ ನೀನಿನ್ನೂ ಶೋಕವನ್ನು ತೊರೆವುದಿಲ್ಲ?
(ಎಂದು ಕಂಬನಿಯನ್ನೊರಸುವನು. ರಕ್ಕಸಿ ನಿಜರೂಪವನ್ನು ತಾಳುವಳು)

ಶೂರ್ಪ—ಅಯ್ಯೋ! ಕೆಟ್ಟೆನು.

ರಾಮ—ಲಕ್ಷ್ಮಣ, ಏನಿದು?

ಲಕ್ಷ್ಮ— ಆರ್ಯ, ಇದೊ ಇದೊ ಈಕೆಯ

ತಾವರೆವರಿಜಂ ಕಣ್ಗ
ಳ್ಪಾವನುಳಿದು ಗಾಲಿರೂವನಾಂಗುಂ ಮೆಯ್ಯುಂ ।
ತೀವಿದ ಪಲ್ಲಿಂ ಮೂಗೊ
ಳ್ಪಾವಿಸೆ ಬಿಸಮುಳ್ಳ ಕೆಟ್ಟ ತೊರೆವೋಲಿರ್ಕುಂ ॥ ೩೯ ॥

ಆಃ! ನಿನ್ನಿಂದ ಬಂದುದೀ ಕಷ್ಟವು. (ಅಸಿಯನ್ನೆಳೆವನು)

ಶೂರ್ಪ—(ಹೆದರಿ) ಸ್ವಾಮಿ, ರಕ್ಷಿಸು, ರಕ್ಷಿಸು. (ರಾಮನ ಕಾಲಿಗೆ ರಗುವಳು)

ರಾಮ—(ಲಕ್ಷ್ಮಣನನ್ನು ತಡೆದು) ಶೂರ್ಪಣಖೇ, ಸತ್ಯವನ್ನು ಹೇಳು. ನಿನಗಭಯವನ್ನಿತ್ತೆನು.

ಶೂರ್ಪ—(ಮೆಯ್ಯನ್ನು ಸಂಕೋಚಗೊಳಿಸಿ ಕಿವಿಯಲ್ಲಿ) ಆರ್ಯ, ಹೀಗೆ.

ರಾಮ—ಶೂರ್ಪಣಖೇ, ನಿನ್ನ ಬಿಡುಗಡೆಗಾಗಿ ನನ್ನ ಸಂದೇಶವನ್ನು ಅಣ್ಣನೆಡೆಗೆ ಕೊಂಡುಹೋಗು.

ಶೂರ್ಪ—ದಯಾಳುವಾದ ಸ್ವಾಮಿಯೀಗ ಅಪ್ಪಣೆಗೊಡಬೇಕು.

ರಾಮ—ಕೇಳು—

ಮಾಯಾಸೀತೆಯುಮಂ ವಿಲೋಭನಮನಿಟ್ಟಾಲೋಕದೊಳ್ಕೃತವೋ
ಪಾಯೋಪಾಶ್ರಯದೆನ್ನಪೊಂದಿ ಪರಿಜಂ ಸೌಮಿತ್ರಿಯಂ ಮಾಡಿ ನೀಂ ।
ವಾಯೂದ್ವೇಗದೆ ಕಳ್ದುಪೋದೊಡವಳಂ ದಲ್ವಂಚಿಸಲ್ಕಾರ್ತೆಯಾ
ಜಾಯಾವೃಂದಮನಾವಗಂ ಕಿಡಿಸಿದ್ಪೈ ವೈಧವ್ಯದಿಂ ನಿನ್ನಯಾ ॥೪೦॥

ಎಂದು ಹೇಳು.

ಲಕ್ಷ್ಮ—ಶೂರ್ಪಣಖೇ, ನನ್ನೀ ಮಾತನ್ನೂ ಹೇಳು :—

ಸಲ್ಲದು ಬಂಧುವೊಳರ್ಥಿತೆ
ಪೊಲ್ಲದ ವೈರಿಗಳೊಳೀಂ ನುಡಿಯುದಂ ಗೆಯ್ಗುಂ ।
ಮಲ್ಲರಣದೊಳ್ಕಡೆನಗೊ
ರ್ಮೆಲ್ಲರೊಡನೆ ತಾಪಸಂಗೆ ದರ್ಶನಲವಮುಂ ॥ ೪೧ ॥

ಶೂರ್ಪ—ನನ್ನಣ್ಣನಿಗೆ ಕಾದಾಟವು ಉತ್ಸವವು.

ಲಕ್ಷ್ಮ—ಆ! ಹೋಗತ್ತ.

ಶೂರ್ಪ—ಇದೊ ಬಾನನ್ನೇರಿದೆನು. ( ಹೋಗುವಳು )

ರಾಮ—ಲಕ್ಷ್ಮಣ, ನಾವು ಮೋಸಕ್ಕೀಡಾದೆವು.

ಮಿಸುನಿಯ ಪುಲ್ಲೆಯೆತ್ತಲಿಡೆಯೆತ್ತಲಿದೆಂಬ ವಿಚಾರಮುಂ ಕೊಳ
ಲ್ಕಸಮುಮನೀಕ್ಷಿಯೂರದೆ ವಧೂವಚನಕ್ಕೆರ್ದೆಗೊಟ್ಟು ರಾಮನುಂ ।
ಬಸವಳಿದಂ ವಿವೇಕಧನರಿಂತು ತೆಗಳ್ಗುಮಿದೇಕೆ ಬೇವಸಂ
ಕುಸರಣಿಯೊಳ್ಮನಂ ಪರಿಯದಿರ್ದೊಡನರ್ಥಮದೆಂತು ಬರ್ಪುದೋ ॥ ೪೨ ॥

ಲಕ್ಷ್ಮ—ಅಣ್ಣಾ, ತಡಮಾಡದೆ ನಾವೀಗ ಯತ್ನವನ್ನು ಮಾಡಬೇಕು.

ರಾಮ—ಒಳ್ಳಿತು. ಮುಂದೆ ಹೋಗು.

ಲಕ್ಷ್ಮ—ಅಣ್ಣನಪ್ಪಣೆಯಂತೆ. ಇತ್ತಬರಬೇಕು.

( ಹೋಗುವರು )

ಇಂತು ಶ್ರೀರಾಮಕೃಷ್ಣಭಟ್ಟ ವಿರಚಿತಮಾದ ಶಕ್ತಿಭದ್ರ ಮಹಾಕವಿಯ ಕನ್ನಡ ಚೂಡಾಮಣಿ ನಾಟಕದೊಳ್ಮೂರನೆಯಂಕಂ ಮುಗಿದುದು.

---

# ನಾಲ್ಕನೆಯಂಕ

---

(ಸೀತೆಯಿಂದಲೂ ಸೂತನಿಂದಲೂ ಕೂಡಿ ತೇರಿನಲ್ಲಿ ಕುಳಿತ ರಾವಣನು ಪ್ರವೇಶಿಸುವನು)

ರಾವಣ—ಲಕ್ಷ್ಮಣ, ವಾರುವಗಳನ್ನು ತ್ವರೆಯಿಂದೋಡಿಸು.

ಭರತಂ ತೋಷದೆ ತಿಣ್ಣಮಂ ತೊರೆಗೆ ಧಾತ್ರೀತ್ರಾಣದೆಮ್ಮಿಂದು ತಾ
ಯ್ವಿರರಂ ಪೆರ್ಚಿದ ಕೂರ್ಮೆಯಂ ತಳೆಗೆ ಕಂಡೆಮ್ಮಿಂ ಶುಚಿ-ಸ್ವಾಂತದೊಳ್ ।
ತೊರೆಗೀ ಕೋಮಳೆ ಬಾಲೆಯುಂ ನಗರಮಂ ಪೊಕ್ಕಾಂತು ನಲ್ವಾಳ್ತಿಯಂ
ಪಿರಿದುಂ ಪರ್ವತಕಾನನಾವಳಿಗಳೊಳ್ಕೃನ್ನುಂಡ ದುಃಖಂಗಳಂ ॥ ೧ ॥

ಸೀತೆ—ನಾಥಾ, ಹಾಗೆನ್ನದಿರು. ತಪೋವನದಲ್ಲಿಯೆ ನನ್ನ ಬಗೆ ಯೊಸೆವುದು.

ಸೂತ—[ಸ್ವಗತ] ಈಕೆಯ ಬಗೆ ಶಾಂತವೂ ಉದಾರವೂ ಆಗಿದೆ. ಇವಳು ವಂಚನೆಗರ್ಹಳಲ್ಲ.

ಸೀತೆ—(ಸ್ವಗತ) ಏನಿದು? ನುಣ್ಮಾತನ್ನು ಕೇಳುತ್ತಿರುವಾಗಳೆ ನನ್ನ ಹೃದಯವು ಬೇವುದು.

ರಾವಣ—[ಕಾಮಾವೇಶವನ್ನು ತೋರಿ] ಈ ಮಾನುಷಿಯ ಮೇಗಣ ನನ್ನ ಹೊಸ ಬಯಕೆಯನ್ನೆಂತು ಕೊನೆಗೊಳಿಸುವೆನು?

ಸೂತ—[ರಾವಣನನ್ನು ನೋಡಿ ಸ್ವಗತ] ಆಹಾ! ಕಾಮಕ್ಕೆ ವ್ಯವಸ್ಥೆ ಯಿಲ್ಲ. ಅದರಿಂದಲೆ-

ತವಸಿಯ ಶುದ್ಧವಲ್ಲಭೆಯುಮಂ ನೆರೆ ನೋಳ್ಪುಮಧೀರವೃತ್ತಿಯಿಂ
ನವಿರೊರಲಿಂದೆ ಕೂಡಿದ ಭುಜದ್ವಯದಿಂದಿರದೆಯ್ದೆ ಪೆರ್ಚುಗುಂ।
ಚವಿಗಳಿದೋಷ್ಠಸಂಪುಟದೆ ಬೆಚ್ಚನೆ ಸುಯ್ಯೆಲರಂಕರಂ ಬಿಡು
ತ್ತಿವನಪದೇಶದಿಂದೆ ನುಡಿಗುಂ ದಲೊಡರ್ಚುಗುಮೇನನಾದೊಡಂ ॥೨॥

ಸೀತೆ—[ಸ್ವಗತ] ಏನಿದು? ಆಕಾರದಿಂದ ಬೇರೊಬ್ಬನಂತೆ ನಾಥನು ತೋರುವನಲ್ಲಾ!

ರಾವಣ—[ಸ್ವಗತ] ಇರಲಿ. ಮೊದಲೀಕೆಯ ಸ್ಪರ್ಶಸುಖವನ್ನನುಭವಿಸುವೆನು. ಆಹಾ! ನನಗೆಂತಹ ಹಿರಿದಾದ ಮೊಗವರಿತದ ಕೇಡು!

ಏಕೆಂದರೆ—

ದೇವೇಂದ್ರನ ಮದಮುಲಿನ್ನೈ
ರಾವತದ ಭಯಂಕರಾಸ್ಯದೊಳ್ವಿಕ್ರಮುಮಂ।
ಕೇವದೆ ತೋರಿದ ಕೆಯ್ಯೈ
ನ್ನೀವನಿತೆಯನಾರ್ತುದಿಲ್ಲ ಕಿಟ್ಟಲ್ಪ್ರತಿಯಾ ॥ ೩ ॥

ಸೀತೆ—(ಸ್ವಗತ) ಏನಿದು ನನಗೆ ರಾಕ್ಷಸ ದರ್ಶನಕ್ಕಿಂತ ಸಾಸಿರ್ಮಡಿ ಸಂತಾಪವು!

ರಾವಣ—[ಸ್ವಗತ] ಇರಲಿ. ಹೀಗೆ ಮಾಡುವೆನು [ಪ್ರಕಾಶ] ದೇವಿ,

ಬನನೇಮವಿಾಹದಿಂ ಸಿ
ರ್ಕನಿಸಿದ ಕಾಡಲರೆ ಪಚ್ಚವಾಗಿರ್ದತಿವೇ।
ಗನಿಗೀರ್ಣಬಂಧವಾದೀ
ನಿನತು ಮುಡಿಯನೀಗಳಾಂ ಸಮಂತು ರಚಿಪ್ಪೆಂ ॥ ೪ ॥

ಸೀತೆ—[ಸಿಗ್ಗಿನಿಂದ] ಕುಮಾರನು ಬಳಿಯಲ್ಲಿರುವನಷ್ಟೆ. (ಎಂದು ತನ್ನ ಕೆಯ್ಯಿಂದ ರಾವಣನ ಕೆಯ್ಯನ್ನು ತಡೆವಳು)

ರಾವಣ—[ತನ್ನ ರೂಪನ್ನೆ ಹೊಂದುವನು]

ಸೀತೆ—(ಕಂಡು) ಹಾ! ಆರ್ಯಪುತ್ರನಲ್ಲವಷ್ಟೆ! (ಹೆದರಿಕೆಯನ್ನು ನಟಿಸುವಳು)

ರಾವಣ—ದೇವಿ, ಬೆದರಬೇಡ, ಬೆದರಬೇಡ. ನಾನು ರಾಮನಲ್ಲವೆ?

ಸೀತೆ—ನೀನು ಮಡಿದೆ.

ರಾವಣ—ಲಕ್ಷ್ಮಣಾ, ಏನಿದು?

ಸೂತ—ಆಯುಷ್ಮಂತನೆ, ಮಾತೊಂದರಿಂದೇನು ಪ್ರಯೋಜನವು?

ಎಳವರೆಯಂ ಸೋಲಿಪ ಪ
ಲ್ಗಳನಗತಟದೋಜೆಯಂ ಮುಗಿಲ್ವಣ್ಣಮುಮಂ।
ಕಳಿಯೇರಿದ ಮೊರೆಗಳಂ
ಘಳಿಲನೆ ತನು ತಾಳ್ದಿ ನಿನ್ನ ತೋರ್ಕುಂ ಪುಟ್ಟಂ ॥ ೫ ॥

ರಾವಣ—( ತನ್ನನ್ನು ನೋಡಿ ) ನಾನೆಂತು ಹೀಗಾದೆನು? ದೇವಿ, ಅಂಜದಿರು, ಅಂಜದಿರು.

ಸೆಡೆಗಾಂ ಸುಂದರಿ ಆಣಮಲ್ತು ವಿಷಯಂ ನೀಂ ಸುಮ್ಮನೇಂ ಶೋಕಿಪಾ
ಕಡುಪಿರ್ಕುಂ ಸುರದೈತ್ಯರಂ ತಳಿದ ಮೂಲೋಕಂಗಳೊಳ್ನಿನ್ನನಾ ।
ರ್ಗಡೆಯೊಳ್ಕಾಯಲಮುರ್ವಭೀಕರದಿಶಾ ಮಾತಂಗದಂತಾಯುಧ
ಕ್ಕೊಡಲಂ ಕೆಚ್ಚೆರ್ದೆಯಿಂದೆ ನೀಡಿದ ತುಳಿಲ್ಸಂದಂ ದಲಾಂಮಾರ್ಕೊಳೆ ॥೬॥

ಸೀತೆ—ನಾಥಾ, ರಕ್ಷಿಸು, ರಕ್ಷಿಸು. ಸೌಮಿತ್ರಿಯೇ, ರಕ್ಷಿಸು, ರಕ್ಷಿಸು.

ಸೂತ—ಇದರಿಂದೇನು? ನಿಜರೂಪವನ್ನೆ ಕೆಯ್ಕೊಳ್ಳುವೆನು. [ಹಾಗೆ ಮಾಡುವನು]

ಸೀತೆ—ಹಾ! ಈತನೂ ಕುಮಾರನಲ್ಲ. [ಬಾಯುಳಿದಳುವಳು] ಹಾ ಆರ್ಯಪುತ್ರಾ! ಹಾ ಕುಮಾರಾ! ನನ್ನನ್ನು ರಕ್ಕಸನ ಕೆಯ್ಯಿಂದ ರಕ್ಷಿಸಿರಿ.

[ನೇಪಥ್ಯದಲ್ಲಿ] ಇದೋ ಬಂದೆನು, ಬಂದೆನು.

ಸೂತ—ಆಯುಷ್ಮಂತನೆ, ನೋಡು, ನೋಡು.

ಅಂಕುಸದೋಜೆಯ ತುಂಡದೆ ಸೊನ್ನೆಯ ಕಂಬಮುಂ ಸಲೆಪೋಲ್ವಗೋ
ಣೆಂಕೆಲಕಾರುತೆ ಪರ್ದಿದೊ ಬರ್ಪುದು ವಿದ್ರುಮಾರುಣನೇತ್ರದಿಂ ।
ಪೇಂಕುಳಿಯಿಂ ಬಡಿವೀ ಖಗಪಕ್ಷದ ಗಾಳಿಯಿಂದುದಿರ್ದಳ್ಕೆಗೊಂ
ಬಂಕೆಯ ಪೂವಳಿರಿಂದೆ ಕುಜಾವಳಿ ತಾಗುದಟ್ಟುಗುಮುರ್ವಿನಂ ॥ ೭ ॥

ಸೀತೆ—ಅಕ್ಕಟಾ! ನನಗಾವುದು ಗತಿ! ನನ್ನನ್ನಾರು ಕಾವರು!

( ನೇಪಥ್ಯದಲ್ಲಿ )

ದಶರಥ ಸಖನಾಂ ಕಾವಂ
ಪೆಸರಿಂದಪ್ಪೆಂ ಜಟಾಯು ರಾವಣ ತೇರ್ನಿ।
ಲ್ಕೆ ಸಹಿಪೆನಜ್ಞರ ತಪ್ಪಂ
ಜಸವಂತುರ್ಕಾಳ ಪತ್ನಿಯಂ ತೊರೆದುಳಿಯ್ಕೆ ॥ ೮ ॥

ರಾವಣ—(ನಕ್ಕು) ಈ ಹಕ್ಕಿ ನನ್ನ ತಪ್ಪನ್ನು ಸೈರಿಸುವುದಂತೆ. ಸೂತ, ಚಾಟಿಯಿಂದ ಹೊಡೆದಿದನ್ನು ತೇರ್ದಾರಿಯಿಂದೋಡಿಸು. ಈ ಹದ್ದು ನಾನಾರೆಂದರಿಯದು.

( ನೇಪಥ್ಯದಲ್ಲಿ) ಅರಿವೆನು, ಅರಿವೆನು. ರಕ್ಕಸನೇ,

ಕಳಿದು ಶಿವಾದ್ರಿಯೊಳಾರ್ಪಂ
ಮುಳಿದರ್ಜುನನನ ಸೆರೆಯೊಳ್ತವಿಸಿ ಪಲವಗಲಂ।
ಬಳಸಿದ ಕಪಿಬಾಲದೆ ನೊಂ
ದೆಳೆಗಂಟಿಯನಾದ ನಿನ್ನನರಿಯದನೊಳನೇ ॥ ೯ ॥

ರಾವಣ—ಹಹಹ! ಆ! ದೊಡ್ಡ ಬಾಯಿ ಬಡುಕವೀ ಹಕ್ಕಿ.

ನೀನಿರು ನೋಳ್ಕೆ ಬಲವು ನೆ
ನ್ನೀ ನಾರಿ ಮಹೇಂದ್ರನೆಂತು ತರಿದಂ ಗಿರಿಯಾ।
ಬಾನೊಳ್ನಿಂತೀ ಹಕ್ಕಿಯ
ಸೂನಗಿಯಿಂದಂತೆರಂಕೆಯುಂ ತರಿದಿಡುವೆಂ ॥ ೧೦ ॥

( ಪ್ರವೇಶಿಸಿ )

ಜಟಾಯು—ಆಗಲಿ. ನೋಡುವ.

ಇರುಳೊಳ್ಕಾಡುರಿಜಾಳೆಯಿಂ ತೊಳಪ ಕಾಲೋರ್ವೀಧ್ರಶೃಂಗಂಗಳಂ
ಕರಿಮೆಯ್ಗೆನ್ನವಿದೋರ್ಂಗಲಿಂದನುಕರಿಪ್ಪೀ ನಿನ್ನ ವಕ್ತ್ರಂಗಳಂ।
ನೆರೆಪತ್ತಂ ಪರಿವನ್ನೆಗಂ ರುಧಿರಪೂರಂ ನೇರ್ದು ಕೊಕ್ಕಿಂ ಸಮಂ
ತುರುರಾಜನ್ಯೆಯ ಮುಂತೆ ಪತ್ತುದೆಸೆಯೊಳ್ಚಲ್ಲಾಡುವೆಂ ರಾವಣಾ॥೧೧

ಸೂತ—ಇದೊ ಇದೊ ಹಾರಿಬರುತ್ತಿದೆ.
ರಾವಣ—ಆ! ನಿಲ್ಲಲ್ಲಿ.

(ಇಬ್ಬರೂ ಕಾದುವರು)

ರಾವಣ—ಇದೊ ಬಡಿವೆನು (ಬಡಿವನು) [ಇದೊ ಹೊಯ್ಯುವೆನು]
ಸೀತೆ—ಹಾ ಕಷ್ಟ! ಕಷ್ಟ!! (ಕಣ್ಣುಗಳನ್ನು ಮುಚ್ಚುವಳು)
ಸೂತ—ಆಹಾ! ಈ ಹದ್ದು ನೊಂದಿತು. ಇದೋ

ನೆತ್ತರ್ಮಿರ್ಹದೆ ಮೆಯ್ಯೊ
ಳ್ಕುತ್ತಿದ ಕೊರಲಿಂದೆ ಗಾಸಿದೋರುತೆ ಬೈಗುಂ।
ಬೊಳ್ತಿನ ಮುಗಿಲಂ ತರುಣನು
ದೊತ್ತರದಿಂ ಪರ್ದು ಬಿಳ್ದಪುದು ಬಾಂದಳದಿಂ ॥೧೨॥

ಸೀತೆ—ಅಯ್ಯೋ! ದೇವತೆಗಳಿಗೆ ಕರುಣೆಯಿಲ್ಲ. ಭಾಗ್ಯಹೀನೆಯಾದ ನನಗಾಗಿ ಈ ಹಕ್ಕಿಯೂ ಸಾವನ್ನು ಪಡೆಯಿತು. (ಅಳುವಳು)

ರಾವಣ - ಸೂತ, ವಾರುವಗಳನ್ನು ಬೇಗನೋಡಿಸು.

ಸೂತ—ಆಯುಷ್ಮಂತನಾಣತಿಯಂತೆ. (ಆಲೋಚಿಸಿ ಸ್ವಗತ)

ಹಿತಮುಂ ಶಾಸ್ತ್ರಾರ್ಥಯುತಂ
ಶ್ರುತಿರಮ್ಯಮುಮಪ್ಪ ಮಾತನೆನ್ನಯ ಕೇಳಂ।
ರತಿಪತಿಯಾಟಮ ದೆತ್ತಾ
ಯತಿಯೊಳ್ಪಿಂ ಪೀವ ಸದ್ಗುಣಾಶ್ರಯ ಮೆತ್ತಲ್ ॥೧೩॥

(ಎಲ್ಲರೂ ಹೋಗುವರು)

ಇಂತು ಶ್ರೀರಾಮಕೃಷ್ಣಭಟ್ಟ ವಿರಚಿತಮಾದ ಶಕ್ತಿಭದ್ರ ಮಹಾಕವಿಯ ಕನ್ನಡ ಚೂಡಾಮಣಿ ನಾಟಕದೊಳ್ನಾಲ್ಕನೆಯಂಕಂ ಮುಗಿದುದು.

---

## ಅಯ್ದನೆಯಂಕ

---

(ಮಂಡೋದರಿಯೂ ಚೇಟಿಯೂ ಪ್ರವೇಶಿಸುವರು)

ಮಂಡೋ - ಏನು! ಹೀಗೂ ಆಗುವುದೆ?

ಚೇಟಿ—ಅರಸಿಯ ಮೊಗವು ಸಂತಾಪವನ್ನು ಸೂಚಿಸುವಂತಿದೆ.

ಮಂಡೋ—ಸಖೀ, ನೀನು ಅಶೋಕವನವನ್ನು ನೋಡಿರುವೆಯಷ್ಟೆ?

ಚೇಟಿ—ಅಲ್ಲಿ ನಮ್ಮೊಡೆಯನೊಬ್ಬ ತಾಪಸಪತ್ನಿಯನ್ನು ಸೆರೆಯಲ್ಲಿಟ್ಟಿರುವನಲ್ಲವೆ? ಅವಳತ್ತಣಿಂದೇನು?

ಮಂಡೋ—ಆಕೆಯ ಹೇತುವಿಂದ ನಮಗಳಿವು ಬರುವುದೆಂದೂಹಿಸುವೆನು.

ಚೇಟಿ—ಒಡತೀ, ಹುಲ್ಲೆಗಳೆಂದೂ ಹುಲಿಯಲ್ಲಿ ನಂಬುಗೆಯನ್ನಿಡ ಲಿಲ್ಲ. ಬಂದಂತೆ ಆಕೆ ಹೋಗುವಳು. ಒಡತಿಯೇ ಲಂಕೇಶ್ವರಿಯೆಂಬುದು ದಿಟವು.

ಮಂಡೋ—ಚಿರಪರಿಚಿತಳಾದರೂ ನೀನು ಹುಚ್ಚಿಯಂತೆ ನನ್ನ ಬಗೆ ಯನ್ನರಿಯೆ. ನಾನಿಂದೊಂದು ಹಾಳು ಕನಸನ್ನು ಕಂಡೆನು.

ಚೇಟಿ—ಶಾಂತಿಯಾಗಲಿ, ಶಾಂತಿಯಾಗಲಿ. ಅರಸಿ ಹೇಳಬೇಕು.

ಮಂಡೋ—ಸಖೀ, ಹಾಗಾದರೆ ಕೇಳು.

ಚೇಟಿ—ಮನವಿತ್ತು ಕೇಳುವೆನು.

ಮಂಡೋ—ಲೆಕ್ಕವಿಲ್ಲದ ಹೊಳೆವಲೆಗಳಿಂದ ದೆಸೆಗಳನ್ನೆಲ್ಲ ವ್ಯಾಪಿಸಿದ, ಅತ್ತಿತ್ತ ಓಡಾಡುವ ತಿಮಿ, ತಿಮಿಂಗಿಲ, ಮಾತಂಗ, ಮಕರಗಳಿಂದ ಭಯಂ ಕರವಾದ, ಮರಕತದ ಬೆಟ್ಟಸಾಲಿನಂತೆ ನೀಲವಾದ ಕಡಲನ್ನು ನಾಲ್ದೆಸೆ ಗಳಿಂದ ಹಾರಿ ಬಂದ ಹುಳುಗಳು ಕುಡಿದು ನಿಮಿಷದಲ್ಲಿ ಆರಿಸಿದುವು.

ಚೇಟಿ—ಹಾ ಕಷ್ಟ! ಆ ಮೇಲೆ?

ಮಂಡೋ—ನನ್ನನ್ನಾದರೊ ಧೂಳಿಯಿಂದ ದೊರಗಾದ ಕೂದಲು ಗಳಿಂದಲೂ, ಹಲ್ಲಿಲ್ಲದ ಬಾಯಿಂದ ಸೊಟ್ಟಾದ ಮೋರೆಯಿಂದಲೂ, ಉರಿ ಗಣ್ಣುಗಳಿಂದಲೂ, ಬರಿದಾದ ಕಿವಿಗಳಿಂದಲೂ, ಕಪ್ಪು ಬಣ್ಣದಿಂದಲೂ ಕೂಡಿದ ಒಬ್ಬ ವಿಧವೆ ಗಟ್ಟಿಯಾಗಿ ಅಪ್ಪಿದಳು.

ಚೇಟಿ—ಅಯ್ಯೋ! ಆ ಬಳಿಕ?

ಮಂಡೋ—ಆ ಸೀತೆಯೂ ದಳಿಂಬವನ್ನುಟ್ಟು ಸಿರಿಕಂಡದ ರಸದಿಂದ ಕುಚಕಲಶಗಳನ್ನಲಂಕರಿಸಿ ಮಲ್ಲಿಗೆಯ ಮಾಲಿಕೆಯನ್ನು ಮುಡಿಯಲ್ಲಿರಿಸಿ ಬಲ್ಲಹನ ಕೆಯ್ಯನ್ನು ಹಿಡಿದು ಪುಷ್ಪಕವನ್ನೇರುತ್ತಿರುವುದನ್ನು ಕಂಡೆನು. ಮತ್ತೆ ಅನುಚಿತವಾದ ಸಮಯದಲ್ಲಿ ನನಗೆ ನಿದ್ದೆಯೂ ಬಂದಿತು.

ಚೇಟಿ—ಅರಸೀ, ದುಗುಡವೇತಕ್ಕೆ? ಕನಸಿಗೆ ಹಲವು ಕಾರಣಗಳನ್ನು ವೈದ್ಯರು ಹೇಳುವರು. ಅಥವಾ ಮೂಲೋಕಕ್ಕೂ ಹೆದರಿಕೆಯನ್ನುಂಟು ಮಾಡುವ ನಮಗೆತ್ತಣಿಂದ ಭಯವು?

( ನೇಪಥ್ಯದಲ್ಲಿ )

ಕಂಪಿಂಪುಂ ಮಿಗೆ ಸೂಸುಪೂಳ್ಕಲರ್ಗಳಾ ಬಲ್ಸೋನೆಯಂ ಮೇಘಜಾ
ಲಂ ಪೀನಂ ಕರೆಗೆತ್ತಲುಂ ಬರ್ದಿಲೆಲರ್ಬಾಂಬೊಚ್ಚದಣ್ಪಿಂ ಕರಂ ।
ಸೊಂಪಂ ತೀಡುಗೆ ಪೆತ್ತು ತೋಂಟವೆಡಗಂ ಪೆರ್ಚಿಕ್ಕೆ ಸರ್ವರ್ತುಗ
ಳ್ತಾಂ ಪಾದಂಗಳನೊಚ್ಚತಂ ಸಸಿ ನಿಮಿರ್ಚುತ್ತಾಲೆಯಂ ಸುತ್ತುಗೆ ॥ ೧ ॥

ಮಂಡೋ—ಏನು, ಡಂಗುರದಂತಿದೆ!

ಚೇಟಿ—ಅರಸಿ, ಹೌದು.

ಮಂಡೋ—ಸಖೀ, ಇದರ ಕಾರಣವನ್ನರಿತು ಬಾ.

ಚೇಟಿ—ಅರಸಿಯಪ್ಪಣೆಯಂತೆ. ( ಹೋಗುವಳು )

ಮಂಡೋ—ಇದರಲ್ಲಾಲೋಚಿಸಲೇನಿದೆ? ಆ ಮಾನಿಸವೆಣ್ಣಿನ ಮನವನ್ನೊಲಿಸುವುದಕ್ಕಾಗಿಯೆ ಮಹಾರಾಜನ ಪ್ರಯತ್ನವಿದು.

( ಪ್ರವೇಶಿಸಿ )

ಚೇಟಿ— ಅರಸಿಗೆ ಜಯವಾಗಲಿ. ( ಕಿವಿಯಲ್ಲಿ ) ಅದಿಂತು.

ಮಂಡೋ—ನಿನಗೆ ಶ್ರಮವನ್ನು ಮಾತ್ರ ಕೊಟ್ಟೆನು. ಈಗ ಮಹಾರಾಜನೇನನ್ನು ಮಾಡುತ್ತಿರುವನು?

ಚೇಟಿ—ಸೀತೆಯನ್ನು ನೋಡಬೇಕೆಂದು ಸಂಜೆಯುಡುಗೆಯನ್ನು ತೊಡುತ್ತಿರುವನು.

ಮಂಡೋ—ಹಾಗಾದರೆ ಬಾ. ಮಹಾರಾಜನರಿಯದಂತೆ ಅಶೋಕವನವನ್ನು ಹೊಕ್ಕು ಪೊದರಿನ ಹಿಂದೆ ಅವಿತು ಪ್ರೇಮವನ್ನಿಡದ ಆ ಸೀತೆಯಲ್ಲಿ ಅರಸನ ಕಾಮುಕ ವೃತ್ತಿಯನ್ನು ನೋಡಿ ನಗುವ.

ಚೇಟಿ—ಅರಸಿಯಾಣತಿಯಂತೆ.

( ಹೋಗುವರು )

## ಪ್ರವೇಶಕ

---

( ಪರಿವಾರದೊಡನೆ ಕಾಮಾವಿಷ್ಟನಾದ ರಾವಣನು ಪ್ರವೇಶಿಸುವನು )

ರಾವಣ – (ಸ್ಪರ್ಶವನ್ನು ನಿರೂಪಿಸಿ) ವರ್ಷವರ, ಮೊದಲೆ ನನ್ನಿಂ ದೋಡಿಸಲ್ಪಟ್ಟ ಸೂರ್ಯನು ಲಂಕೆಗೆ ಬರಲು ಕಾರಣವೇನು? ಮಂತ್ರಿಯಾದ ಚಿತ್ರಯೋಧಿಯನ್ನು ಕರೆದುಕೊಂಡು ಬಾ.

ವರ್ಷ—(ಸ್ವಗತ) ಆಹಾ! ಸ್ವಾಮಿಗೆ ಎಂತಹ ಮದನೋನ್ಮಾದವು ಹತ್ತಿರುವುದು! ಏಕೆಂದರೆ

ಇರುಳೊಳ್ ಶೋಭಿಪ ಕಣ್ಗಂ
ಹರಿಸಂಗುಡುವಂಬುರಾಶಿಯಲೆಗೊಂವಣಿಯಂ ।
ಪಿರಿದುಂ ತೂಗುವ ಕದಿರ್ಗಳಿ
ನುರುಸೌಖ್ಯಮನೀವ ಚಂದಿರನನರಿಯನಿವಂ ॥ ೨ ॥

ರಾವಣ—ಏಕೆ ತಡಮಾಡುವೆ?

ವರ್ಷ—ಒಡೆಯನಪ್ಪಣೆ. (ಸ್ವಗತ) ಇಂತಹ ಕುತ್ತಕ್ಕೆ ಮಂತ್ರಿಗಳು ವೈದ್ಯರಲ್ಲ. (ಹೋಗುವನು)

ರಾವಣ—(ಆಲೋಚಿಸುತ್ತ ನೋಡಿ) ಇವನು ಸೂರ್ಯನಲ್ಲ. ಚಂದ್ರನಿಗಾದರೊ ಅಭಯವನ್ನಿತ್ತಿರುವೆನು. ಏಕೆಂದರೆ

ಸಾಸಿರಕದಿರ್ಗಳ್ದಳ್ಳಿಸೆ
ನೇಸರ್ಚಂದಿರರನೆಂತುಮರಿಯದ ಕಾಮೋ ।
ಪಾಸಕರಿಂದುವನರಿಗುಂ
ಮಾಸದ ಹರಿನೀಲಭಿತ್ತಕಾಂತಿಯ ಕರೆಯಿಂ ॥ ೩ ॥

(ಆಲೋಚಿಸಿ) ಈ ದುಮ್ಮಾನವು ನನ್ನಿಂದಲೇ ಬಂದುದು.

ಆವಂ ಕಿರಣದೆ ದೆಸೆಯೊ
ಳ್ತಾವರೆಯುಮನೆನ್ನ ನೋಯಿಸಂ ಬಿಟ್ಟೊಲವಂ ।
ಗಾವಿಲನೀ ಬಿದು ಸುಡುಗುಂ
ಭಾವಿಸದವತೆಯಿನಶಕ್ತನುಂ ಬಲಿಯುಕ್ಕುಂ ॥ ೪ ॥

(ಮಂತ್ರಿ ಪ್ರವೇಶಿಸುವನು)

ಮಂತ್ರಿ—(ಸುತ್ತಲೂ ನೋಡಿ) ಓಹೋ! ಹಲವು ಕಾಲದ ಬಳಿಕ ರಾಕ್ಷಸರಿಂದು ಬೆಳುದಿಂಗಳಿನ ಸೊಬಗನ್ನನುಭವಿಸುವರು. ಏಕೆಂದರೆ,

ಸೊದೆಪನೆ ಕಾವನ ತೆತ್ತಿಗ
ನಿದೊ ತಣ್ಗದಿರಂ ತೊಳಪ್ಪನಿದಿರೊಳ್ದೇವಂ ।
ಕದಿರೋಳಿಯಿನಿಂಗಡಲಲೆ
ವುದುವಿನೊಳಳ್ದಿದವೊಲಿರ್ಕುವಿೂ ಜಗಮೆಲ್ಲಂ ॥ ೫ ॥

ರಾವಣ—ಚಂದಿರ ನಿನತ್ತು ಕದಿರ್ಗಳ್
ನೊಂದೆನ್ನೊಳ್ಕಿಚ್ಚನೆಂತು ಕಾರುಗುಮದರೊಳ್ ।
ಕಂದರ್ಪನ ಮೇಣ್ನಿನ್ನ ಬ
ಲಂ ವಲದಿಲ್ಲಳಲನಾಂತ ಸೀತೆಯ ಬಳ್ಪೇ ॥ ೬ ॥

ಮಂತ್ರಿ—

ಪದನಂ ದಾಂಟಿದ ರಾಜನಂ ಮರೆದು ಸಾವೆಂ ರಾಮನಿಂ ಮೇಣ್ಪಿರೋ
ಧದೆ ಮಾತಾಡಿ ವಿಪತ್ತನಾಂಪೆನತಿಕೋಪಂಗೊಂಡ ಲಂಕೇಶನಿಂ ।
ಮುದಮಿರ್ಬಟ್ಟೆಯೊಳಿಲ್ಲದಿರ್ದೊಡಮಣಂ ಸಾವಾಳ್ದನಿಂದೊಳ್ಪಿತೇ
ಕಿದೆನೆನ್ನೀ ಪ್ರಭುಗಪ್ಪುದೆಂತುಮುರದಂತಂ ನೋಡೆನಾ ಕಷ್ಟಮಂ ॥ ೭ ॥

ಸ್ವಾಮಿಯವಸ್ಥೆ ಬಹಳ ದುಃಖಕರವಾಗಿದೆ; ಏಕೆಂದರೆ ಇವನು ಕೂದಲಿಂದ ಕಟ್ಟಲ್ಪಟ್ಟು ಒನಕೆಯಿಂದ ಬಡಿಯಲ್ಪಡುವನು. ಅರಸನನ್ನೀಗ ನೋಡುವೆನು. (ನಡೆದು ನೋಡಿ) ನಮ್ಮ ಸ್ವಾಮಿ,

ಮೋನಂದಾಳ್ದಿತೆ ಚಾನದೊಳ್ಪಡುತೆ ಸುಯ್ಲಿಂದೋಷ್ಠಮಂ ಜೃಂಭಣಾ
ಧೀನಂ ಕಾರ್ಗಳೆದಂಬುದಂಬೊಲೆಸಕಂಗುಂದಿರ್ದಪಂ ಮೇಣನಂ ।
ಗಾನೇಕಾನಲಬಾಣದಿಂದೊಳಗು ನೊಂದೌರ್ವಾಗ್ನಿಯಿಂ ಬೆಂದ ನೀ
ರಾನಂತಾಶ್ರಯದಂತೆವೋಲರಿಯದಂಗೋನ್ಮಾಥಮಂ ಪೆತ್ತಪಂ ॥ ೮ ॥

(ಹತ್ತಿರ ಹೋಗಿ) ಸ್ವಾಮಿಗೆ ಗೆಲ್ಲವಾಗಲಿ.

ರಾವಣ—ಹೊಸ ಸುದ್ದಿಯೇನಾದರೂ ಉಂಟೇ ?

ಮಂತ್ರಿ—(ಸ್ವಗತ) ಅರಸನೊಲವಿನಿಂದ ನುಡಿವನು. (ಪ್ರಕಾಶ) ನಾಳ್ನುಡಿಯೊಂದುಂಟು.

ರಾವಣ—ಇರು, ರಾಮನು ವಾಲಿಯನ್ನು ಕೊಂದು ಸುಗ್ರೀವನನ್ನು ಹೊಂದಿರುವನೆಂದಷ್ಟೆ?

ಮಂತ್ರಿ—ಅದೆ. ವಿಶೇಷವೂ ಉಂಟು.

ರಾವಣ—ಹೇಳದನ್ನು.

ಮಂತ್ರಿ—ಅವನಾಣತಿಯಿಂದ ಸೀತೆಯನ್ನು ಹುಡುಕುವುದಕ್ಕೆ ವಾನರ ಸೈನ್ಯವು ಎಲ್ಲಾ ದೆಸೆಗಳಲ್ಲಿಯೂ ಅಲೆದಾಡುತ್ತಿದೆಯೆಂದು.

ರಾವಣ—ಏನೇನು? ಅವನಾಣತಿಯಿಂದ ಸೀತೆಯನ್ನು ಹುಡುಕುವುದಕ್ಕೆ ವಾನರ ಸೈನ್ಯವು ಎಲ್ಲಾ ದೆಸೆಗಳಲ್ಲಿಯೂ ಅಲೆದಾಡುತ್ತಿದೆಯೆಂದೇ? ನೋಡು—

ಪೆರ್ವಿಟ್ಟುಗೆಯ್ದು ಪಂ ಪಿಡಿ
ಪೂರ್ವಾಜಿಯೊಳಮರಜೇತೃರಾಕ್ಷಸಸೈನ್ಯಂ।
ಗರ್ವದೆ ಸಿಲಿಲೆಂತಿರ್ಕುಂ
ಪರ್ವತಕಾನನದೊಳಾಡುವಾ ಕಪಿಯೂಥಂ ॥ ೯ ॥

ಮಂತ್ರಿ—ಕೋತಿಗಳು ನಗೆಗೀಡಾಗಿರಬಹುದು; ಆದರೆ-

ರಾವಣ—ಅದೇನು? ಹೇಳು.

ಮಂತ್ರಿ—ಬಿಲ್ಲಾಳುಗಳಲ್ಲಿ ರಾಮನಜಯ್ಯನೆಂದು ಹೇಳುವರು.

ರಾವಣ—ಏನೇನು? ಬಿಲ್ಲಾಳುಗಳಲ್ಲಿ ರಾಮನಜಯ್ಯನೆಂದು ಹೇಳುವರೆ? ನೋಡು—

ಇದಿರೊಳ್ಸಗ್ಗಿಗರಾಣ್ಮನಾಪವನ ಕನಲ್ಗಿಚ್ಚಿಂಗಶಕ್ತಂ ನಿಲ
ಲ್ಕಾದನಾರಾತಿಸಿವಾಸಪರ್ವತದೊಳಂ ತೋಳ್ವಲ್ಮೆ ಸಂಪತ್ತೊ ಸೋ।
ಲ್ತು ದಿನೇಶಾದಿಖಗಂಗಳಾವನೆಡೆಯೊಳ್ಬೇರ್ದಾಣಮಂ ಪೋಕುಮೆಂ
ತಮ ಮರ್ತ್ಯಂ ಪಗೆಯಪ್ಪನಾಯೆನಗೆ ನೀಂ ಕೇಳಾಳ್ಕಣಾ ಹಾಸ್ಯಮಂ ॥೧೦॥

ಮಂತ್ರಿ—ಏನೇನು? ರಾಮನು ಮರ್ತ್ಯನೇ? ನೋಡು—

ತಂದೆಯ ಮಾತಿಂ ಕಾಡೊ
ಳ್ಬಂದಿರ್ಪಂ ರಾಮನಲ್ತು ಕೇವಲಮರ್ತ್ಯಂ।
ಕೊಂದು ಜಗಮನುತ್ಪಾದಿಸು
ವಿಂದಿರೆಯರಸಂ ದಿನೇಶಕುಲದೊಳ್ಬಳೆದಂ ॥ ೧೧ ॥

ರಾವಣ—ಏನೇನು? ಕೇಶವನೆಂದೇ? ಓಹೋ! ಈತನಿಗೆ ಹೆದರಬೇಕು.

ತನ್ನಣ್ಣನಪ್ಪ ಸುರಪತಿ
ಯಂ ನೂಂಕಿ ಬರ್ದಿಲಮನೆನ್ನ ಕಿಡಿಪ ಪಡೆವಳರ್ ।
ಕನ್ನೆಯರೊಡನಿಂದ್ರಾಣಿಯು
ಮಿನ್ನೆತ್ತಲ್ಲಡುಗೆ ಬೀರಮಿರ್ದಪುದರಿಯಾ ॥ ೧೨ ॥

ಮಂತ್ರಿ—ಏನೇನು? ಆವನು ದೇವತೆಗಳನ್ನು ಗೆದ್ದನು?

ರಾವಣ—ದೇವತೆಗಳನ್ನು ಗೆದ್ದವನನ್ನರಿಯೆಯಾ?

ಮಂತ್ರಿ—ಅರಿಯೆನು.

ರಾವಣ—ನಾನೇ.

ಮಂತ್ರಿ ಇದು ಹುಸಿ.

ಅಮರ್ದುಣಿದೆಸೆವಳರಂ ಗೆ
ಲ್ದು ಮುಹೂರ್ತದೆ ನೆಗಳ್ದ ನಿನ್ನನೆಂತು ಮನಸಿಜಂ ।
ಸುಮಬಾಣನಿಕರದಿಂ ಪೊ
ಯ್ದು ಮನೋಧೃತಿಯಂ ಸಡಿಲ್ಚಿದಪ್ಪುದಿೀಗಳ್ ॥ ೧೩ ॥

ರಾವಣ—ಏನು? ಮನಸಿಜನು ನನ್ನನ್ನು ಹೊಡೆವನೆಂದೂಹೆಯೋ?

ಮಂತ್ರಿ—ಇದು ಪ್ರತ್ಯಕ್ಷವಷ್ಟೆ.

ರಾವಣ—ಇದು ಸತ್ಯವಾಗಿ ಪ್ರತ್ಯಕ್ಷವು! ನೋಡು—

ಬಾನ್ನವಿರನ ನೊಸಲ್ಗಣ್ಣಿಂ
ದಂ ನೆಗೆದುರಿಯಿಂದೆ ಬೂದಿಯಾದ ವಿಷಮಬಾ ।
ಣಂ ನೋಯಿಪನೆಂತೆನ್ನಂ
ಚೆನ್ನೆಯ ಮುಖಚಂದ್ರನೆನ್ನ ಬಗೆಯಂ ಜಡಿಗುಂ ॥ ೧೪ ॥

ಮಂತ್ರಿ—ಬಿದಿವಳಿಯೊಳ್ಪುಟ್ಟಿದನುಂ
ವಿದಿತಸಕಲವೇದಶಾಸ್ತ್ರನಪ್ಪ ನಿನಗೆ ಬೇ ।
ರಿದವೆಂಡಿರೊಳಾಸೆಯಿನೇ
ನದರಿಂದಾವಗಮಕೀರ್ತಿ ನಿಲ್ಕುಂ ಜಗದೊಳ್ ॥೧೫॥

ರಾವಣ—ಏನು, ಇದೂ ಅಕೀರ್ತಿಯೇ?

ಮಂತ್ರಿ—ಇದರಿಂದ ಹೆಚ್ಚಿನ ಅಕೀರ್ತಿಯೇನು?

ರಾವಣ—ಅಂತಾದರೆ,

ವೇದವೆ ನೆಗಳ್ತೆವಡೆದುಂ
ಸಾಧಿಸಿ ನೂರ್ಜನ್ನಮಂ ಕರಂ ನಾಕದ ರಾ।
ಜ್ಯಾಧಿಪನುಂ ಮೂರಡಿಯನ
ಸೋದರನಾಗಿಂದ್ರನೆಂತಹಲ್ಯೆಯನೊರಲ್ದಂ ॥೧೬॥

ಮಂತ್ರಿ—ಅಕೀರ್ತಿಯಂತಿರಲಿ. ಸರ್ವಾರ್ಥಸಾಧನವಾದ ಧರ್ಮವನ್ನು ಬಿಡಿದಟ್ಟುವುದೇ?

ರಾವಣ—ನೀತಿಯನ್ನರಿತವನೇ, ಸಾಧ್ಯವು ಬೇಕಾದರಷ್ಟೆ ಸಾಧನವನ್ನು ಕೈಯ್ಕೊಳ್ಳುವುದು? ನೋಡು—

ನಾಕಂ ಬೇಳ್ಕುಮೆನುಂಟೆತಿ
ಪಾಕಾರ್ಯಸ್ತ್ರಮಿದೆನತ್ತು ಚಂದಿರಹಾಸಂ।
ಪೋಕಳೆ ದುರ್ಬಲರರನವು
ದೇಕೆನ್ನನ್ನರ್ಗೆ ಪಥ್ಯಮೆಲ್ಲಂ ಬಲಿಗಂ ॥ ೧೭ ॥

ಮಂತ್ರಿ—ಪ್ರಭುವಿನ ಶಕ್ತಿಯಂತಹುದೆ. ಆದರೂ ನಿಮ್ಮಂತಹ ಶಕ್ತಿಮಂತರು ಸಾಧ್ವಾಚಾರವನ್ನು ಬಿಡುವುದೊಳ್ಳಿತಲ್ಲ. ಅಲ್ಲದೆ, ರಾಜರ್ಷಿಧರ್ಮಪರಾಯಣನಾದ ರಾಮನ ಧರ್ಮಾಚರಣೆಯನ್ನು ಕೆಡಿಸಬಹುದೇ?

ರಾವಣ—ಏನೇನು? ರಾಮನು ಧಾರ್ಮಿಕನೇ? ನೋಡು—

ಪೂಣೆಗವಾಳಿಯಂ ಮುರಿದು ತಾಡಗೆಯಂ ಜವದಾಣಕಟ್ಟಿದಂ
ಮಾಣದೆ ಪೂಣ್ದು ನಿಂದ್ರಸುತನೊಳ್ಕಣೆಯಂ ಮರಸುಂದಿ ತಮ್ಮನೊಳ್।
ಕೇಣದಿಡಚ್ಚಿಯಂ ಪಗೆಗಳಂ ತಳೆದುಂ ಜೆಡೆವಿಲ್ಗಳಂ ನರಂ
ಜಾಣನೆ ಸಾಧು ಮೇಣ್ದುರುಳರಾವಿದೆ ಮಕ್ಕಳ ಮೂಢಬುದ್ಧಿ ಹಾ ॥ ೧೮ ॥

ಮಂತ್ರಿ—ಪ್ರಭೋ, ನನ್ನ ಅಧಿಕಾರವಿಷ್ಟೆ.

ರಾವಣ—ಹೇಳು, ನಿನ್ನಧಿಕಾರವೇನು?

ಮಂತ್ರಿ—ತ್ರಿವರ್ಗವನ್ನು ಬೋಧಿಸುವುದು.

ರಾವಣ—ಆ ತ್ರಿವರ್ಗವಾವುದು ?

ಮಂತ್ರಿ—ಧರ್ಮಾರ್ಥಕಾಮಗಳು.

ರಾವಣ—ಬೇರೆ ಬೇರೆಯಾಗಿ ನುಡಿ.

ಮಂತ್ರಿ—ಧರ್ಮವು.

ರಾವಣ—ದಂಡನೆಗೆ ತಕ್ಕರಂ ಬಿಡ
ದಂಡಲೆವಂತಕನಮೆನ್ನ ದಂಡಿಕುಮಾಳ್ಗಳ್ ।
ಬಂಡಾರಮಂ ಸುರರ್ಕಳ
ಕೊಂಡೆಂ ಕೆಯ್ಯೊಳೆನಗೇಕೆ ಧರ್ಮದುಪಟಳಂ ॥ ೧೯ ॥

ಮತ್ತಾವುದು ?

ಮಂತ್ರಿ—ಅರ್ಥವು.

ರಾವಣ—ಅರ್ಥದಿಂದ ಸಾಧಿಸತಕ್ಕುದೇನು ?

ಮಂತ್ರಿ—ಕೋಶದಂಡಗಳ ಅಭಿವೃದ್ಧಿ.

ರಾವಣ—ಆಗಸವಟ್ಟೆಗರಕ್ಕಸ
ರಾಗಿರ್ಪರ್ಗಂ ದಂಡು ಕೋಶಮುಳಕೇಶನೆ ಮಾ ।
ಲೋಗಮಿದೆನ್ನಾಣೆಗೆ ತಲೆ
ವಾಗಿಕುಮಖಿಲೇಷ್ಟಮುಂಟು ಫಲಮರ್ಥದಿನೇಂ ॥ ೨೦ ॥

ಕೊನೆಯದಾವುದು ?

ಮಂತ್ರಿ—ಕಾಮವು.

ರಾವಣ—ಅದನ್ನೇ ನಾವು ಬಯಸುವೆವು. ಅದರಿಂದಲೆ ನನ್ನ ಬಯಕೆ ಕೊನೆಗೊಳ್ಳಬೇಕು.

ಮಂತ್ರಿ—ಅದರಲ್ಲಿಯೂ ಮಿಗಿಲೆನಿಸಿದುದರಲ್ಲಿ ಮನವಿಡಬೇಕು.

ರಾವಣ—ಹಾಗೆಯೆ ಮಾಡುತ್ತಿರುವೆನು.

ಮಂತ್ರಿ—ಹಾಗಾದರೆ,

ಬೇರಿನನುಂಬಿದಾಣದ
ಕೊರಡ ಸೆಣ್ಣಂಪೆ ಬಾಳ್ತೆಯೇನದು ನಿಸ್ಸ್ನಾ |
ವಿಚಾರಿಗುಮನಬೋಧಜನಂ
ಚಾರುತ್ರಯೀಂ ಸುರಪಕಾಮಿನೀವೃಂದಮುಮಂ ॥ ೨೧ ॥

ರಾವಣ—ಮೂಢಾ, ಈ ವಿಷಯದಲ್ಲಿ ಇನ್ನೊಬ್ಬನು ಪ್ರಮಾಣವಲ್ಲ.

ಸಿರಿಯುಂ ಪಲಂಬರುಣ್ಬ
ಪರಮಾರ್ಘಂ ತಿರೆಯೊಳತ್ತೆ ರತ್ನಂ ಬಳೆಗುಂ |
ಪರಸತಿಯೊಲಪ್ಪೊಂದದಿರೇಂ
ತೊರೆವನೆ ಮನುಜಂ ತನತ್ತು ಪೇರುಜ್ಜುಗಮಂ ॥ ೨೨ ॥

ಮಂತ್ರಿ—(ಸ್ವಗತ) ಇನ್ನುಮುಂದೆ ಕೈಯ್ದುಗಳೆ ಗತಿ. ಅರಸನು ಮತಿಯ ನೆಲೆಯನ್ನು ದಾಟಿರುವನು.

ರಾವಣ—ಹೋಗು, ರಾಮನ ವಾರ್ತೆಯನ್ನರಿಯಲ್ಕೆ ಈಗಳೆ ಬೇಹುಕಾರರನ್ನಾಜ್ಞಾಪಿಸು.

ಮಂತ್ರಿ—ದೇವನಾಣತಿ

ಕಾಳೆಗವೆಳರಿಂ ಮೇಣ್ಣೆ
ನ್ನೇಳಿದನೊಳ್ಕೂರ್ಮೆಯುಂ ನುಡಿಪೆನಿಲ್ಲಂ ಕೂ |
ಪೇೞಿಕೆಯುಂ ಕಂಧರೆಯೊ
ಳ್ಬಾಳನಿಡೆಯುವೆಳ್ಕಿದಂ ಪತಿಹಿತಮನೊರೆಗುಂ ॥ ೨೩ ॥

(ಹೋಗುವನು)

ರಾವಣ—ವರ್ಷವರ, ಅಶೋಕವನದ ದಾರಿಯನ್ನು ತೋರಿಸು.

ವರ್ಷ—ಮಹಾರಾಜನಪ್ಪಣೆ. ಇತ್ತ ಬರಬೇಕು.

(ಇಬ್ಬರೂ ತೋಟವನ್ನು ಹೊಗುವರು)

ರಾವಣ—(ಸುತ್ತಲೂ ನೋಡಿ) ಆಹಾ! ಮನಸ್ಸಿಂತು ಪರಿಚಿತ ವಸ್ತುಗಳನ್ನೆ ಬಿಗಿಹಿಡಿವುದು! ಇಲ್ಲಿ ಕುಳಿತಿದ್ದರೂ ಸೀತೆ ರಾಮತಪೋವನವನ್ನೆ ಜಾನಿಸುತ್ತಿರುವಳು. ಇಲ್ಲಿಯಾವರೋ,

ಕಡೆಗಣ್ಚಿಂದ್ರನ ನೋಟಮುಂ ಬರ್ದಿಲನಾಡಿಂಪಂ ವಲಂ ಪೆರ್ಚಿಸೀ
ಗಿಡುಗುಣ್ಪಂ ದಡದಿಂ ಸುರಾಪಗೆಯು ಕಿೞ್ತಿಂ ಭೂಮಿಗುಯ್ಯಲ್ಕೆ ಸಂ ।
ಗಡದಿರ್ಪಂಚೆಗಳಿಲ್ಲಿ ಹೇಮಸರಸೀಜಾತಂಗಳಂ ಮುದ್ದಿಕುಂ
ಕೊಡಗೆಂಗಣ್ಣಲರ್ವಕ್ಕಿ ಚೆಂದಳಿರನಕ್ಕುಂ ಕಂಡು ಕಾಮಾತುರಂ ॥ ೨೪ ॥

ವರ್ಷ—(ಸ್ವಗತ) ಆರಡಿ ಸಂಪಗೆಗಂಪನ್ನು ಕಾಣುವಂತೆ ಸೀತೆ ರಾವಣನ ಸಿರಿಯನ್ನು ಕಾಣುವಳು.

ರಾವಣ—(ಕಾಮೋದ್ರೇಕವನ್ನು ತೋರಿ)

ಮಾವಸುಗೆದೊಂಗಲಂಬಿಂ
ದಾವಂ ಭರದಿಂದೆ ಲೋಗರಂ ಪೊಯ್ಗುಮವಂ ।
ಪೂವಿಂ ಸಗ್ಗಮರಂಗಳ
ದೀ ಪೊೞ್ತೆಂತೆಚ್ಚಪಂ ಮುಗುಳ್ಯುಗ್ಮಶರಂ ॥ ೨೫ ॥

ವರ್ಷವರ, ಸೀತೆ ಸಿಸವೆಮರದಡಿಯಲ್ಲಿರುವಳಷ್ಟೆ ?

ವರ್ಷ— ಪ್ರಭೋ, ಹೌದು.

ರಾವಣ—

ಮಾಂಕರಿಸುತ್ತೆ ನೋಳ್ಕುಮಿವಳಾನಳಿಪಿಂದಿರೆ ಮೇಣ್ಕೊಡಂಕೆಯುಂ
ಸಂಕಟದೊಳ್ಕರಾವೃತಮನಾಗಿಕುಮಿನ್ನುಡಿಯಾಡೆ ರಾಮನಾ ।
ಸೊಂಕಿಲ ಜಾನದೊಳ್ಪಳಯಿಕುಂ ನಿಲೆ ಕೆಯ್ಮುಗಿದಾನಿದಿರ್ಗಿದೇಂ
ಪಂಕಜನೇತ್ರೆಯುಂ ಸೆಳೆವ ಸಾಧನಮುಂ ನೆರೆ ಕಾಣೆನಾವಗಂ ॥ ೨೬ ॥

(ಸಿಸವೆ ಮರದ ಕೆಳಗೆ ಕುಳಿತ ಸೀತೆಯೂ ಬಳ್ಳಿವನೆಯ ಹಿಂದೆ ನಿಂತ ಮಂಡೋದರಿಯೂ ಚೇಟಿಯೂ ಬರುವರು)

ಸೀತೆ—ಆಹಾ! ರಕ್ಕಸರೆಂತಹ ನಿರ್ದಯರು!

ಮಂಡೋ—ಸಖೀ, ಇದೊ ಮಹಾರಾಜನಿಲ್ಲಿರುವನು. ನಾವು ಬಗೆದುದನ್ನೀಗ ನೋಡಬೇಕಾಗಿ ಬಂದಿತು.

ರಾವಣ—(ಹತ್ತಿರ ಹೋಗಿ) ದೇವೀ,

ಸೀತೆ—(ಸ್ವಗತ) ಪಾಪಿಯೇನನ್ನು ಹೇಳುವನೋ!

ರಾವಣ—ದೇವಿ,

ನೀರೊಳ್ಗಂಗೆಯ ಮಿಂದು ಕಾಶ್ಮೆವುರುಳಿಂ ಕೆಯ್ಗ್ಗಯ್ದು ಕಲ್ಪಾವನೀ
ಜಾರಾಮಂಗಳ ಶರ್ವಪರ್ವತದೊಳಂ ಸನ್ನಂದನೋದ್ಯಾನದೊಳ್ ।
ಸೇರಲ್ಕಾನಿಸನಾರ್ತನಿಲ್ಲ ತಪದಿಂದಂ ಸ್ವರ್ಗಭೋಗಂಗಳಂ
ನಾರೀ ನೀನವನುಣ್ಣು ನಿನ್ನ ತಡೆಗುಂ ಸ್ವರ್ಗಾರ್ಥ್ವಮಂ ನೋಂಪಿಯೇ ॥೨೭॥

ಸೀತೆ—ನಿನ್ನ ಸ್ವರ್ಗಾರ್ಥ್ವವು ಮಹಾಪಾತಕವೆ. ಪತಿದೇವನ ಸೇವೆ ಗೆಯ್ಯುತ್ತ ನರಕವನ್ನೆ ಸೇರಲು ಬಯಸುವೆನು.

ರಾವಣ—ದೇವಿ, ನಿನಗಾಗಿ ನನ್ನಂತಃಪುರವನ್ನೆಲ್ಲ ತೊರೆವೆನು.

ಮಂಡೋ—ಇದು ಮಹಾರಾಜನ ನೆನಹಿನಲ್ಲಿರಲಿ.

ಸೀತೆ—ಅಂತಃಪುರವನ್ನು ಮಾತ್ರ ತೊರೆದರೆ ಸಾಲದು; ನನಗಾಗಿ ನೀನು ಹರಣವನ್ನೂ ಬಿಡಬೇಕಾಗಿ ಬರುವುದು.

ಮಂಡೋ—ಅಕ್ಕಟಾ! ಮನುಷ್ಯಜಾತಿಗೆಂತಹ ಬಿರುನುಡಿಯಿರುವುದು!

ರಾವಣ—ಸತ್ಯವಾಗಿ ಕಾಮನು ನನ್ನ ಹರಣವನ್ನೊಯ್ಯುವನು.

ಸೀತೆ—ಹಾಗಲ್ಲ, ಹಾಗಲ್ಲ. ನನ್ನ ಪತಿದೇವನು ಕಾಮನಿಂದಲೂ ಹೆಚ್ಚು ಸುಂದರನು.

ರಾವಣ—( ನಕ್ಕು ) ಹಹಹ!

ಕಾಡುಗವಡಗಲಿವುಲ್ಗಣೆ
ಗೀಡಲ್ತು ದಶಾಸ್ಯನೆಂಬುದಿದು ಯುಕ್ತಂ ದಲ್ ।
ನೀಡುಂ ಮೆಯ್ಗಣ್ಣನ ವ
ಜ್ರಾಡಂಬರಮಂ ಮರಲ್ಪೊಲಿರ್ದೆಯೊಳ್ಪೊತ್ತಿಂ ॥ ೨೮ ॥

ಮಂಡೋ—ಏನಿದು ಮಹಾರಾಜನಾಲೋಚನೆ? ಆವವುಪಾಯದಿಂದಲೂ ಈಕೆ ಸಮ್ಮತಿಸುವಳಲ್ಲ.

ರಾವಣ—ದೇವಿ, ಇದೊ ನಿನಗೆ ಕೆಯ್ಮುಗಿದು ಬೇಡುವೆನು :—

ಸುಂದರಿ ನೀನೆನ್ನೊಳ್ಸೇ
ಹಂದೋರೆ ಸುರಾಸುರಾಹಿಗಂಧರ್ವವಧೂ ।
ಸಂದೋಹಮನಾಂತವರೋ
ಧಂ ದಿಕ್ಕನೆ ತೊಳ್ತಿರೆಲ್ಲಮುಕ್ಕುಂ ನಿನ್ನಾ ॥೨೯॥

ಮಂಡೋ— ಇದನ್ನಾದರೂ ಸಾನ್ನೀಕೆಗೆ ಮಾಡುವೆನು ; ಅನ್ಯರನ್ನರಿಯೆನು.

ಚೇಟಿ—ಅರಸಿ, ನೋಡು ನೋಡು ; ಅರಸನು ಸುತ್ತಲೂ ಮುಗಿದ ಕೈಗಳಿಂದ ನಸುವರಳಿದ ತಾವರೆಗಳಿಂದ ಕೂಡಿದ ಮಹಾಸಮುದ್ರದಂತೆ ತೋರುವನು.

ಮಂಡೋ—ತನ್ನ ಬಯಕೆ ಮುರಿದುದರಿಂದ ಮಹಾರಾಜನೀ ಹದಿಬದೆಯಲ್ಲಿ ಕೋಪಗೊಳ್ಳಲಾರನೆ ?

ವರ್ಷ—(ಸ್ವಗತ) ನನಗಿವರಿಬ್ಬರಿಂತು ಕಾಣುವರು—

ಮೊದೆವೊಲ್ಬೆಳ್ಕೆಯ್ಯಂ ಪೊಂ
ದಿದ ಜಾನಕಿ ತನ್ನಿ ಪೋಲ್ಬುವೈಂದವಕಳೆಯುಂ ।
ತದೆಗುಂ ಮುಗುಳ್ಗೆಯ್ಯನಿವಂ
ಪದುಮಂ ಮುಗುಳ್ದಿರ್ಪ ತಾವರೆಗೊಳನ ಸೊಬಗಂ ॥೩೦॥

ರಾವಣ—ದೇವಿ, ಇದು ಬೋಳಯಿಸುಹದ ಹೆಚ್ಚುಗೆಯ ಪ್ರಣಾಮವು. (ಸಾಷ್ಟಾಂಗವಾಗಿ ಮಣಿವನು)

ಸೀತೆ—ಛೀ! ಸುಡು. (ಕಾಲನ್ನು ದೂರ ಸೆಳೆವಳು)

ಮಂಡೋ—ಈಕೆ ಬಹುಧೀರೆ ; ಕೇಸರನ್ನು ಕಾಲಿಂದ ಕೊಡಹುವಂತೆ ಮಹಾರಾಜನ ತಲೆಯನ್ನು ತಿರಸ್ಕರಿಸುವಳು. ಸೀತೆ ಭೂದೇವಿಯ ಮಗಳು, ರಾಮನು ಶ್ರೀಮನ್ನಾರಾಯಣನೆಂಬ ನಾಳ್ನುಡಿಯಿಾಗ ಸತ್ಯವಾಗಿರುವುದು.

ವರ್ಷ—ಅರಮಗಳೇ, ಮಹಾರಾಜನ ಪ್ರಣಿಪಾತವನ್ನೇತಕ್ಕೆ ನಿರ್ಲಕ್ಷಿಸುವೆ ?

ದ್ವಿಜರಾರಂ ಸೊಗಕಾಟಿಸಿ
ಭಜಿಕುಂ ದೇವೇಂದ್ರಮುಖ್ಯರಾ ಸುರರೀಗುಂ ।
ತ್ಯಜಿಸಿ ಪಗದಿಯುಂ ಮಾನಮು
ನ್ನೃಜುಮಾನಸೆ ಆರ್ಗವಂ ತಲೆಗಳಿಂ ಮಣಿಗುಂ ॥೩೧॥

ಸೀತೆ—ಇದು ಪ್ರಣಿಪಾತವಲ್ಲ ; ಕೇವಲ ವಿನಿಪಾತವೆ.

ವರ್ಷ—ಈಕೆಯನ್ನೊಲಿಸುವುದಸದಳವು. (ಹಿಂದಿರುಗಿ ನಿಲ್ಲುವನು)

ರಾವಣ—ದೇವಿ, ನಿನ್ನಡಿಗಳೆ ನನಗೆ ಶರಣವು.

ಸೀತೆ—ನನ್ನ ನಾಥನಡಿಗಳನ್ನು ಶರಣುಹೊಗು.

ರಾವಣ—(ಕೋಪದಿಂದ ಫಕ್ಕನೆದ್ದು) ಏನು? ಏನು?

ಮುನ್ನೀರೊಡ್ಡಣೆವೊಂದಿದ
ನಿನ್ನಯ ತಾಯ್ಪ್ರಜೆಗಳಿತ್ತ ಷಷ್ಠಾಂಶಮನುಂ।
ಡುನ್ನತಿವಡೆದ ನೃಪರ್ಗೆ
ಲ್ಲಂ ನೆಗಳ್ದ ಮಡದಿ ಸತೀತ್ವಮೆಲ್ಲಿಯೊ ನಿನಗಂ ॥೩೨॥
(ಎಲ್ಲರೂ ಹೆದರಿಕೆಯನ್ನು ತೋರುವರು)

ಸೀತೆ—ನಾನಿದನ್ನರಿಯೆನು.

ರಾವಣ—ಎಲ್ಲಿ ಚಂದ್ರಹಾಸವು?

ಸೀತೆ—ಇದು ನನಗೊಳ್ಳಿತೆ. ನನ್ನ ಹರಣದ ಶರಣವು ಪತಿದೇವನ ಚರಣಗಳೆ.

ಮಂಡೋ—ಅಯ್ಯೋ ಕಷ್ಟ! ಹೀಗಾಯಿತೇ! ಈಕೆ ಹದಿಬದೆಯಷ್ಟೆ. ನನ್ನ ಪ್ರಾಣವನ್ನಿತ್ತು ಮಹಾರಾಜನು ಮಾಡುವ ಪಾತಕದಿಂದೀಕೆಯನ್ನು ರಕ್ಷಿಸುವೆನು. (ಬೇಗನೆ ಹತ್ತಿರ ಬಂದು ಅವರಿಬ್ಬರ ನಡುವಿನಲ್ಲಿ ನಿಲ್ಲುವಳು)

ಮಂಡೋ—ಮಹಾರಾಜನಿಗೆ ಜಯವಾಗಲಿ.

ರಾವಣ—(ನೋಡಿ) ಓಹೋ! ದೇವಿ ಮಯಸುತೆ ಮಂಡೋದರಿ! (ಕೀಳ್ಮೊಗನಾಗಿ ನಿಲ್ಲುವನು)

ಮಂಡೋ—ಮಹಾರಾಜ, ಈಕೆಯ ಗಂಡನೂ ನಿನ್ನ ಬಾಳಿಗೀಡಲ್ಲ; ಸೆರೆಯಾಳಿವಳ ಪಾಡೇನು? ನೀನು ಕಡೆಗಣಿಸಿದರೆ ತಾನಾಗಿ ಈಕೆ ಸಾವಳು.

ವರ್ಷ—(ಸ್ವಗತ) ಅರಸನ ಪೆಣ್ಣೀಕೆ ವಲಂ
ಧರಣಿವೊಲೆಮ್ಮಾಳ್ದನಿರ್ಕುಮಬ್ಧಿವೊಲಿವರಿ।
ರ್ವರ ನಡುಗೆ ನಿಂತ ಮಂಡೋ
ದರಿ ತಿರೆಯಂ ಕಾವ ತೀರದಂದದೆ ಪೊಳೆಗುಂ ॥೩೩॥

ನನಗೂ ಇದೇ ಸಮಯವು. (ಪ್ರಕಾಶ) ದೇವ, ಕತ್ತಿಯನ್ನೇತಕ್ಕೆತ್ತುವೆ?

ದೇವರ್ಕಳ್ಗೊದವಿದನ
ಘಾವಳಿಯಂ ನೋಡಿ ಕಿಚ್ಚುಗಾರುವ ಬಳೆಯಂ ।
ತಾವರೆಗಣ್ಣಂ ನಿನ್ನೊಳ್
ಸಾವುವೆದೆಯ ಬಿಲ್ಲನೇಂ ಹರಂ ಬಗ್ಗಿಸಿದಂ ॥೩೪॥

ರಾವಣ—ಯುಕ್ತವಿದು.

(ನೇಪಥ್ಯದಲ್ಲಿ) ಸ್ವಾಮಿಗೆ ಜಯವಾಗಲಿ, ಮಹಾರಾಜನಿಗೆ ಜಯವಾಗಲಿ, ಲಂಕೇಶ್ವರನಿಗೆ ಜಯವಾಗಲಿ, ದೇವನಿಗೆ ಜಯವಾಗಲಿ, ಭದ್ರಮುಖನಿಗೆ ಜಯವಾಗಲಿ, ಹತ್ತುಗಳಿಗೆಗಳುಳಿದಿವೆ; ಮಾಹದ ಕಾಲವು ಮೀರುವುದು. (ಸಂಕ್ರುಪಳಹಗಳು ದನಿಗೆಯ್ವುವು) ಮಹಾರಾಜನಿತ್ತ ಬರುವುದು.

ರಾವಣ—ಇಂದು ನೀವು ತೊಡರಾದಿರಿ. ಇರಲಿ. ಬೆಳಗಿನ ಹೊತ್ತಿನಲ್ಲಿ ನೋಡುವೆನು.

(ಪರಿವಾರದೊಡನೆ ರಾವಣನು ಹೋಗುವನು)

ಸೀತೆ—ವಲ್ಲಭನನ್ನಿನ್ನೊಮ್ಮೆ ಕಾಣುವೆನೆಂಬುದರಲ್ಲಿ ಎಳ್ಳಷ್ಟಾದರೂ ನನಗಾಸೆಯಿಲ್ಲ. ರಕ್ಕಸನ ಕೆಯ್ಯಿಂದ ಸಾವುದೂ ಮಹಾಪಾತಕವು. ಅದರಿಂದ ಪತಿದೇವನನ್ನು ನೆನೆದು ತಾನಾಗಿ ಹರಣವನ್ನು ತೊರೆವೆನು.

(ನೋಡಿ)

ಭಾಗ್ಯವಶದಿಂದೆಲ್ಲ ರಕ್ಕಸಿಯರು ನಿದ್ದಿಸುತ್ತಿರುವರು. ಇರಲಿ. ಅಯ್ಯೋ! ರಕ್ಕಸನ ತಲೆಯ ಸೋಂಕಿನಿಂದ ನನ್ನ ಪಾದಗಳಶುದ್ಧಗಳಾಗಿವೆ. ತಡೆಯಿಲ್ಲದೆ ಸಮೀಪದಲ್ಲಿರುವ ತಾವರೆಗೊಳವನ್ನು ಹೊಕ್ಕು ಮಿಂದು ಪರಿಶುದ್ಧಳಾಗಿ ಆತ್ಮವನ್ನು ದುಃಖದಿಂದ ಬಿಡಿಸುವೆನು.

(ಹೋಗುವಳು)

ಇಂತು ಶ್ರೀರಾಮಕೃಷ್ಣಭಟ್ಟವಿರಚಿತವಾದ ಶಕ್ತಿಭದ್ರಮಹಾಕವಿಯ ಕನ್ನಡ ಚೂಡಾಮಣಿ ನಾಟಕದೊಳೆಯ್ದನೆಯಂಕಂ ಮುಗಿದುದು.

---

# ಆರನೆಯಂಕ

(ಅಂಗುಳೀಯಕವನ್ನು ಹಿಡಿದುಕೊಂಡು ಹನುಮಂತನು ಪ್ರವೇಶಿಸುವನು)
ಹನು—ಜಳಧಿಯ ಬಂಧು ನಾಗವನಿತಾಸುರತಾಪ್ತನೆನಿಪ್ಪ ಶೈಲಮಂ
ಕಳೆದು ಸಡಿಲ್ಚಿದಾಗಸದೊವಲ್ಪೊಲೆ ವೇಗದೆ ವಾರಿದಂಗಳಂ ।
ಸೆಳೆವುತುಮಿಾವುತುಂ ಗುರುಗವುಚ್ಚರಿಯಂ ಜವದಂಗುಳೀಯಮಂ
ಕೊಳುತೆ ಪುಣುಂಬುವೋಲ್ಸತಿಗೆ ರಾಮನ ಲಂಕೆಗೆ ಬಂದೆನೀಗಳಾಂ॥೧॥
ಆವುದ್ಯಾನವೆಲ್ಲಿರಬಹುದು ! ದೇವಿಯಲ್ಲಿ ಸಿಸವೆಮರದಡಿಯಲ್ಲಿ ಕುಳಿತಿರುವ ಳೆಂದು ಗೃಧ್ರರಾಜನು ಹೇಳಿದ್ದನು. ಅದನ್ನೀಗ ಹುಡುಕುವೆನು. (ನಡೆದು ಕಂಡು) ಓಹೋ ! ರಕ್ಕಸವೊಳಲಿನ ಸೊಬಗೆಂತಹುದು ! ಈ ಮಾತು ಸತ್ಯವೆ :—

ಸಗ್ಗಿಗರ ನಾಡೊಳಾವಾ
ವಗ್ಗಳಗಣ್ಗೆಡ್ಡವಾದ ಪುರುಳುಂಟೊ ಅದಂ ।
ಮೊಗ್ಗರದಿಂ ಕಿಳ್ತು ಗಡಾ
ಸುಗ್ಗಿಯ ಲಂಕಾಪುರಕ್ಕೆ ರಾವಣನೊಯ್ಗುಂ ॥೨॥

(ಸೊಂಕನ್ನು ತೋರಿ) ಇದೇ ಉದ್ಯಾನವಿರಬೇಕು ; ಏಕೆಂದರೆ,

ಮದವೇರಿದಾರಡಿದನಿಯ
ನೊದಗಿಸಿ ಮರವೂವ ಬಂಡುದಿಣ್ಪಂ ಸೆಳೆವು ।
ತ್ತುದಬಿಂದುಗಳಂ ಬೆಂಚೆಯ
ವುದುಗೊಂಡುರೆ ತಣ್ಪನಾಂತ ತಂದೆಯೆ ಪೇಳ್ಗುಂ ॥೩॥

(ನೋಡಿ) ಇದೆ ಆವುದ್ಯಾನವು, ಇದನ್ನೀಗ ಹೊಗುವೆನು.

(ಹೊಕ್ಕು ಸುತ್ತಲೂ ನೋಡಿ ಅಚ್ಚರಿಗೊಂಡು)

ದುಗುಲಂಗಳ್ಪಲ್ಲವಂ ಶಾಖಿಗಳ ಮಲರುಮೊಳ್ಮುತ್ತು ಪಣ್ವಿದ್ರುಮಂಗಳ್
ಮಿಗೆ ಪರ್ಣಂ ವಾಯುಜಂಗಳ್ಮರಕತಮೆ ಕೊನರ್ಪೊನ್ನ ಕೊಂಬೋಳಿಯಕ್ಕುಂ।
ಜಗದೊಳ್ಮಂತೆಂದುಮಾಂ ಕಾಡಿಚನಿರೆಯುಮಿವಂ ಕಂಡೆನಿಲ್ಲಂ ದಲೀ ಶಾ
ಖಿಗಳಿರ್ಕುಂ ಸ್ವರ್ಗಸಾರಂ ಬಗೆವೆನಿದರಿನೇವಾಳ್ತಿ ಬೇರೆನ್ನ ಕಜ್ಜಂ ॥ ೪ ॥

ಇಲ್ಲಿಯಸುಗೆಮರದಡಿಯಲ್ಲಿ ದೇವಿ ಕುಳಿತಿರುವಳೆಂದಾ ಸಂಪಾತಿ ಹೇಳಿದ್ದನು. ಆ ಮರವೆತ್ತಲಿರಬಹುದು? (ನಡೆದು ನೋಡಿ) ಇದೆ ಅಸುಗೆ. (ಸಂತಸ ದಿಂದ ಬಳಿಗೆ ಹೋಗಿ ಸುತ್ತಲೂ ನೋಡಿ ಮಗುಡದಿಂದ) ಇಲ್ಲಿ ದೇವಿಯನ್ನು ಕಾಣೆನಲ್ಲಾ! (ಎಂದು ಮೂರ್ಛೆ ಹೋಗುವನು. ಪುನಃ ಸಮಾಧಾನಪಟ್ಟು) ರಕ್ಕಸನು ದೇವಿಯನ್ನು ಕೊಂದನೆ? ತಾನಾಗಿ ಸಾಹಸಕೃತ್ಯವನ್ನು ಗೆಯ್ದಳೆ? ನಾನು ಕಡಲನ್ನು ದಾಟಿದುದು ಬರಿದಾಯ್ತು; ಸುಗ್ರೀವನ ಬಯಕೆ ಬಂಜೆ ಯಾಯ್ತು. ಏನನ್ನು ಹೇಳಿ ಸ್ವಾಮಿಯತ್ತೀ ಗುರುತಿನುಂಗುರವನ್ನು ಹಿಂದೆ ಕೊಡುವೆನು! ದೇವಿಯಿಲ್ಲದಿದ್ದರೆ ಸ್ವಾಮಿಯೆಂತೂ ಹರಣದಿಂದಿರಲಾರನು; ಅದರಿಂದ ಸುಗ್ರೀವನೂ, ಭರತನೂ, ಲಕ್ಷ್ಮಣನೂ, ರಾಣಿಯರೂ ಹಾಗೆಯೆ ಗೆಯ್ವರು. ಕಾರ್ಯವನ್ನೆಸಗದೆ ಮೊಗವನ್ನು ತೋರಿಸುವ ನಾನೆ ಇದಕ್ಕೆಲ್ಲ ಕಾರಣನಾಗುವೆನು. ಅರಸನೊಡನೆ ಸಟೆಯನ್ನೂ ಹೇಳಲಾಗದು. ಅದರಿಂದ ನಾನೂ ಸಾಧ್ಯವಿದ್ದಷ್ಟು ಯತ್ನವನ್ನು ಕೆಯ್ಕೊಂಡು ಯಶೋಮೂರ್ತಿ ಯಾಗುವೆನು.

(ನೇಪಥ್ಯದಲ್ಲಿ)—ದೇವ, ಚಂದಿರನೆ,

ಹನು—ಇದೇನಿರಬಹುದು! ಇನ್ನೂ ಕೇಳುವಾ.

(ಮತ್ತೆ ನೇಪಥ್ಯದಲ್ಲಿ)—ಇದೊ ನಿನಗೆ ಕೆಯ್ಮುಗಿವೆನು. ಬಹಳ ಕಾಲದ ಬಳಿಕ ನೀನು ನನ್ನ ಕಣ್ಣಿಗೆ ಕಾಣಿಸುವೆ.

ಹನು—ಇದು ಹೆಚ್ಚಿದ ಅಳ್ಕೆಯಷ್ಟೆ! ಹೋಳಲಿನೊಳಗೆ ಕುಳಿತೆಲ್ಲ ವೃತ್ತಾಂತವನ್ನು ನೇರಾಗಿ ಅರಿವೆನು. (ಹಾಗೆ ಮಾಡುವನು) ಇದೊ ದೇವಿ. ಈಕೆಯ

ಪಿರಿದುಂ ಪೊರಳ್ದ ಕತದಿಂ
ತಿರೆಯೊಳ್ಪಾರಿವಗೊರಲ್ವೊಲೊಪ್ಪುವ ಪಾಂಸೂ।
ತ್ಕರಮುಶ್ರುಧಾರೆಯಿಂ ತೊ
ಯ್ದಿರಡುಂ ಮೊಲೆಗಳ್ಗೆ ಬಣ್ಣವುಡಿಯುಂತಕ್ಕುಂ ॥ ೫ ॥

ಶ್ರೀರಾಮಚಂದ್ರನ ಕಿವಿಗಳಿಗೆ ಕಾಣ್ಕೆಯಾಗುವ ಈಕೆಯ ವಿಲಾಪ ವಚನಗಳನ್ನು ಸ್ವಲ್ಪಕಾಲ ಕಿವಿಗೊಟ್ಟು ಕೇಳುವೆನು. (ಸುಮ್ಮನಿರುವನು)

( ಅಳುತ್ತಿರುವ ಸೀತೆ ಬರುವಳು )

ಸೀತೆ—ಎಲೈ ಚಂದ್ರನೆ, ನಾನು ನಿನ್ನನ್ನು ಬಯ್ಯುವೆನು. ಕ್ಷತ್ರಿಯರಿಗೂ ನಿನಗೂ ಇರುವ ನಂಟು ಪ್ರಸಿದ್ಧವಾದುದು. ಅಲ್ಲದೆ ನೀನು ನನ್ನ ಪತಿದೇವನಿಗೋರಗೆಯೆಂದು ಜನರೆನ್ನುವರು. ಇಲ್ಲ, ಇಲ್ಲ; ನಾನು ಹುಚ್ಚಿಯೆ; ನೀನು ಒಂದೊಂದು ದಿನದಲ್ಲಿ ಒಬ್ಬೊಬ್ಬ ನಲ್ಲೆಯಿಂದ ತಕ್ಕೈಸಲ್ಪಡುವೆ. ಆರ್ಯಪುತ್ರನಾದರೊ ನಿರ್ಭಾಗ್ಯಳಾದ ನನ್ನಿಂದಲೆ ಆನಂದಗೊಳ್ಳುವನು. ಅದಂತಿರಲಿ. ಒಂದೆಡೆಯಲ್ಲಿ ನೀನು ನನ್ನನ್ನೂ, ಇನ್ನೊಂದೆಡೆಯಲ್ಲಿ ಆರ್ಯಪುತ್ರನನ್ನೂ ನೋಡುತ್ತಿರುವೆ. ಏನನ್ನೂ ನುಡಿಯದೆ ಕಡೆಗಣಿಸುವವನಂತೆ ಹೋಗುವೆ.

ಹನು—ಈಕೆಯ ಪರಿದೇವನದ ಕೊನೆಯಲ್ಲಿ ರೂಪನ್ನು ತೋರುವೆನು. ( ಸುಮ್ಮನಿರುವನು )

ಸೀತೆ—ಸಪ್ತರ್ಷಿಗಳೆಂಬವರಿವರೆ. ಇವನೆ ರಘುಕುಲದೊವಜನಾದ ವಸಿಷ್ಠಮಹರ್ಷಿ. ಇವಳೆ ಹದಿಬದೆಗಳಿಗೆ ನಿದರ್ಶನಳಾದ ಅರುಂಧತೀದೇವಿ. ಭಗವತಿ, ಇದೇನು ನಿನ್ನ ಕೆಲಸವು? ರಕ್ಕಸವೊಳಲಿನಲ್ಲಿರುವ ನನಗೊಂದುಪಾಯವನ್ನೂ ಹೇಳುವುದಿಲ್ಲವಷ್ಟೆ. ಎಂತಾದರೂ ನಿನ್ನ ದರ್ಶನ ಫಲವನ್ನು ಹುಸಿಮಾಡುವೆನು.

ಹನು—ಸ್ವಾಮಿನಿ, ನಾನಾದರೊ ಅದನ್ನು ತಡೆಗಟ್ಟುವೆನು.

ಸೀತೆ—ಎಲ್ಲಿಂದೀ ಕೂಗು? ( ಬೇರೊಂದೆಡೆಗೆ ನೋಡಿ ) ಇದೊ, ಇದೊ, ಈ ಹೆಣ್ಣು ಚಕ್ರವಾಕವು ಇರುಳುರಕ್ಕಸನಿಂದ ಬೇರ್ಪಡಿಸಲ್ಪಟ್ಟು ನನ್ನಂತೆ ಸುಮ್ಮನೆ ಗೋಳಿಡುತ್ತಿದೆ.

ಹನು—ದೇವಿ, ಇದು ಸುಮ್ಮನಲ್ಲ. ಪೂಜ್ಯಪಾದನಾದ ಒಡೆಯ ರಾಮನೇ ನಿನ್ನೀ ಮಾತನ್ನು ಕೇಳುವನು.

ಸೀತೆ—ಇದೇನು ನಾನು ಬಯ್ದ ದೇವತೆಗಳೊಲುಮೆಯೇ? ಇಲ್ಲದಿದ್ದರೆ ಇದು ದಿಟವಾಗಿ ರಕ್ಕಸನ ಬೇರೊಂದು ಮಾಯೆಯಿರಬೇಕು.

ಹನು—ತಾಯೇ, ಸಂದೆಯವನ್ನು ಬಿಡು. ಆರ್ಯಮನುವಂಶದೀಪನಾದ ಶ್ರೀರಾಮಚಂದ್ರನ ತೊತ್ತು ನಾನು.

ಸೀತೆ—(ಸ್ವಗತ) ಇಂಪಾಗಿದೆಯಲ್ಲ ಈತನ ನುಡಿ! ರಾಕ್ಷಸ ಜಾತಿಯೆಂದೂ ಹೀಗೆ ನುಡಿವುದಿಲ್ಲ. ಹುತ್ತಿನಿಂದ ಹಾರವೆಂತು ಹುಟ್ಟುವುದು?

ಹನು—ದೇವಿ, ನಿನಗೆ ಕೈಯ್ಗಳನ್ನು ಮುಗಿವೆನು.

ಸೀತೆ—ನಿನ್ನ ರೂಪನ್ನು ತೋರಿಸು. ಮರದ ಹೋಳಲಿನಿಂದ ಹೊರಗೆ ಬಾ.

ಹನು—ಒಡತಿಯಾಣತಿಯಂತೆ. (ಕೆಳಗಿಳಿದು ಎರಗುವನು)

ಸೀತೆ—(ನೋಡಿ) ಹಾ! ಇವನು ವಾನರನಷ್ಟೆ! ರಕ್ಕಸನು ಹೆಚ್ಚಾಗಿ ಈ ರೂಪನ್ನು ತೆಗೆವುದಿಲ್ಲ.

ಹನು—(ಮಣಿದು)

ಜನವಂದ್ಯಪುಣ್ಯಮಂದಾ
ಕಿನಿ ತುಹಿನಾಚಳಮನೆಂತು ಮುನ್ನೀರುಮನಂ।
ತೆ ನೆಗಳ್ದ ಸೆಯ್ತು ಜನಕನಂ
ಮನುಜೇಶ್ವರರಾಮನಂ ವಿಶುದ್ಧಿಗೊಳಿಸೆ ನೀಂ ||೬||

ಸೀತೆ—(ಸ್ವಗತ) ಈಯಿನ್ನುಡಿಗಳ ಪ್ರಜಾಪತಿಯಾರಿರಬಹುದು? ಇರಲಿ. ಮೊದಲೀತನನ್ನು ಕೇಳುವೆನು; ಆ ಬಳಿಕ ಇವನನ್ನು ಪರೀಕ್ಷಿಸುವುದಕ್ಕೆ ಆಶ್ಚರ್ಯಚೂಡಾಮಣಿಯುಂಟು. (ಪ್ರಕಾಶ) ವಿಸ್ತರದಿಂದ ನುಡಿ. ನೀನಾರು? ನಿನಗೆ ನನ್ನ ಪತಿದೇವನ ಸಂಸರ್ಗವೆಂತಾಯ್ತು?

ಹನು—ಒಡತೀ, ಲಾಲಿಸಬೇಕು. ನಾನು ವಾಯುವಿನ ಮಗನು, ಸುಗ್ರೀವನ ಬಂಟನು. ನನ್ನ ಹೆಸರು ಹನೂಮಂತನೆಂದು.

ಸೀತೆ—ಮತ್ತೆ?

ಹನು—ಆ ಸುಗ್ರೀವನಿಗೆ ಹೆಣ್ಣಿಗಾಗಿಯೂ ಮಣ್ಣಿಗಾಗಿಯೂ ಅಣ್ಣನಾದ ವಾಲಿಯಲ್ಲಿ ಹೆಚ್ಚಾದ ಹಗೆತನವಿದ್ದಿತು.

ಸೀತೆ—ಮತ್ತೆ?

ಹನು—ಬಳಿಕ ವಾಲಿಗೆ ಹೆದರಿ ಸುಗ್ರೀವನು ಪೊಡವಿಯನ್ನೆಲ್ಲ ಸುತ್ತಿದನು.

ಸೀತೆ—ಆ ಬಳಿಕ ?

ಹನು—ಬಳಿಕ ಮುನಿಶಾಪಬಲದಿಂದ ವಾಲಿಭಯವಿಲ್ಲದ ಪುಷ್ಯವಂತವೆಂಬ ಬೆಟ್ಟದಲ್ಲಿ ಸುಗ್ರೀವನಿದ್ದನು.

ಸೀತೆ—ಆ ಮೇಲೆ ?

ಹನು—ಆ ಹೊತ್ತಿಗೆ ಅಲ್ಪಾಯುಷನಾದೀ ರಕ್ಕಸನು ದೇವಿಯನ್ನು ವಂಚಿಸಿ ಕಷ್ಟಕ್ಕೀಡುಮಾಡಿದನು.

ಸೀತೆ—ಮತ್ತೆ ?

ಹನು—ಆಗ ಸ್ವಭಾವಧೀರನಾದರೂ ಶ್ರೀರಾಮಚಂದ್ರನು ಸಾಗರದಂತೆ ಕಾರಣಬಲದಿಂದ ಕಳವಳಗೊಂಡನು.

ಸೀತೆ—ಆ ಬಳಿಕ ?

ಹನು—ಬಳಿಕ ರಕ್ಕಸನಿಂದ ಕೊಲ್ಲಲ್ಪಟ್ಟ ಜಟಾಯುವಿನ ಮಾತಿನಿಂದ ತಮ್ಮನೊಡನೆ ನಿನ್ನನ್ನರಸುತ್ತ ಹಲವು ಬಾರಿ ಬೆಟ್ಟಗಳನ್ನೂ ಕಾಡುಗಳನ್ನೂ ತನ್ನ ಕಾಲ್ನಡೆಯಿಂದ ಸುದ್ದಿಗೊಳಿಸಿದನು.

ಸೀತೆ—ಆ ಮೇಲೆ ?

ಹನು—ಬಳಿಕ ನಾನು ಸುಗ್ರೀವನಾಜ್ಞೆಯಿಂದ ವಾಲಿಯ ಜೇಹಿನವರನ್ನು ಪರೀಕ್ಷಿಸಲ್ಕೆ ಒಂದು ಹೇರಡವಿಯಲ್ಲಿ ತಿರುಗಾಡುತ್ತಿದ್ದಾಗ ದೇವನನ್ನು ಕಂಡೆನು.

ಸೀತೆ—(ಆನಂದದಿಂದ) ನಿಜವಾಗಿ ಕಣ್ಣಾರೆ ಕಂಡೆಯಾ ?

ಹನು—ಎನ್ನೊಡತಿ, ಹೌದು.

ಸೀತೆ—ಹೇಳು, ಹೇಳು, ನನ್ನಾರ್ಯಪುತ್ರನೆಂತಹನು ?

ಹನು—ಲಾಲಿಸು, ದೇವಿ.

ಸೀತೆ—ಮನವಿತ್ತಿರುವೆನು.

ಹನು—ಪೂಜ್ಯಪಾದ ಶ್ರೀರಾಮಚಂದ್ರನ ಅಂಗಗಳಿಂತಿರುವುವು—

ಎತ್ತಿದುಗುರ್ಗಳಿಂ ಗೆರೆಗಳಿಂವರಿಶಂಖದ ಕೂಡಿದಂಘ್ರಿಗ
ಳ್ಕೆತ್ತಿದ ಬಲ್ತಜಂಘೆ ಮಣಿಗಲ್ಗಡಣಂಬೊಲೆ ಸೂಕ್ಷ್ಮಮಧ್ಯಮುಂ ।
ಬಿತ್ತರದಂಕಮಂ ತಳೆದುರಸ್ಥಳಮುಂ ನಿಡುದೋಳ್ಗಳಬ್ಜಪ
ಜೋತ್ತಮಕಾಂತಿವೆತ್ತ ನಯನಂ ಪರಿಪೂರ್ಣಸುಧಾಂಶುವೋಲ್ಮೊಗಂ ॥೭॥

ಸೀತೆ—ಈಗ ನಾನಾರ್ಯಪುತ್ರನನ್ನು ಕಣ್ಣಾರೆ ನೋಡುವೆನೆಂದು ಭಾವಿಸುವೆನು. ಆ ಬಳಿಕ?

ಹನು—ತಾಯೇ, ಆಗ ದೇವನನ್ನು ಹೀಗೆ ಕಂಡೆನು:-

ಎನ್ನಿಂದೀವರಪತ್ರಲೋಚನೆ ಅದೆತ್ತಲ್ಪೋದೆ ನೀನೆಂದು ದೇ
ವಂ ನೀಡುಂ ಮದನಾರ್ತಿಯಿಂದಳಲುತುಂ ಕಣ್ಣೀರ ತಂದಲ್ಗಳಿಂ।
ರನ್ನಂಗೆತ್ತಿದ ಚೆಲ್ವಿನಂದುಗೆಯನಾಂಪಂ ಕಂಕಣಂಬೊಲ್ಬಳಿ
ಕ್ಕೆನ್ನೊರ್ಮೆತ್ತಿ ಕಿರೀಟದಂತೆ ತಲೆಯೋಳೇನೆಂಬೆನಾ ಕಷ್ಟಮಂ ॥ ೮ ॥

ಹೆಚ್ಚೇಕೆ? ನಿನ್ನ ಚರಣಾಭರಣವು ದೇವನಿಗೆ ಸರ್ವಾಭರಣವಾಯಿತ್ತು.

ಸೀತೆ—ಅದನ್ನೆಂತು ನೀನರಿದೆ?

ಹನು—ನಾನು ಕಾಣದಿದ್ದುದಕ್ಕೆಲ್ಲ ಪ್ರಮಾಣವು ಕುಮಾರ ಲಕ್ಷ್ಮಣ ನಿಹನಷ್ಟೆ.

ಸೀತೆ—ಸತ್ಯ. ಆ ಬಳಿಕ?

ಹನು—ಆಗ,

ಮರಕತಕಾಂತಿವೆತ್ತ ಮದವೇರಿದ ಬಂಡುಣಿಗುಂಪನುಳ್ಳ ಭೂ
ಮಿರುಹಕದಂಬಕಂ ಪರಿವ ಕಾಳ್ಪುರದಿಂ ಸೊಬಗಾಂತ ತಳ್ಪಲುಂ।
ಗಿರಿಯ ವಯಸ್ಯನಧ್ವಗರ ಪಂಪೆಯ ಸೀರ್ಪನಿವೆತ್ತ ಗಾಳಿಯುಂ
ನರಪನಮಾಣಮಾರವೊಲಿಸಲ್ಕೆ ನಿನತ್ತು ಗುಣಂ ವಿನೋದಿಸೆ ॥ ೯ ॥

ಸೀತೆ—ಮತ್ತೆ?

ಹನು—ತಾಯೆ,

ನಲ್ಲೆಗೆ ಚಂಚುವಿಂ ಪದೆದು ಪಾವಸೆಯೂಡಿಪ ಜಕ್ಕವಕ್ಕಿಯಂ
ಮೆಲ್ಲನೆ ಚೆಲ್ವನಾಂತ ಜಳಜಂಗಳ ಜೇನನೆ ಪೀರ್ವ ತುಂಬಿಯಂ।
ವಲ್ಲರಿಯಂ ಸರೋರುಹದ ನುಣ್ಣನೆ ಮೊಲ್ಲದರಿಂಪನೀಂಟುವಾ
ಮಲ್ಲಿಗೆಗಣ್ಣನಂ ನೃಪತಿ ನಿನ್ನೆಡೆಗಟ್ಟಲೆ ಸೇರ್ದನಾವಗಂ ॥ ೧೦ ॥

ಸೀತೆ—ಆ ಮೇಲೆ?

ಸೋಗೆಯ ಕೇಗಿಂ ಗರಿವೂ
ದಾಗಿಂ ಸೌರಭಮನಾಂತ ಗಾಳಿಯಿನಿರುಳೋಳ್ ।
ಬೀಗಿದ ಕಾರ್ಮುಗಿಲೊಡ್ಡಿನ
ಬೇಗುದಿಯಿಂ ಚಣಮನಿರ್ದನಸುಸಂಶಯದೊಳ್ ॥ ೧೧ ॥

ಸೀತೆ—ಅಯ್ಯೋ ಕಷ್ಟ! ಆ ಬಳಿಕ?

ಹನು—ಆಷ್ಟರಲ್ಲಿ ಮಿಂಚಿನ ಬೆಳಕಾಗಲು,

ಕೆಯ್ದಳಿರೆ ನೀರೊಳಾಳ್ದಿ
ನ್ನೆಯ್ದಿಯ ಮೇಲ್ದೋರ್ಕುಮೆಂದು ದೇವಂ ಪಲಸೂ ।
ಳಿಯ್ದುತೆ ಚೆಚ್ಚರದಿಂ ಬಿಸು
ಸುಯ್ದು ಪಿಡಿದನಬ್ಜೆ ಚೆಂಗಲವೆವೂಗಳುಮಂ ॥೧೨॥

ಸೀತೆ—ಮತ್ತೆ?

ಹನು—ಮತ್ತೆ ಬೇರೊಂದೆಡೆಗೆ ಹೋಗಿ,

ತಳಿರಿಂ ಮೆಲ್ವಾಸಂ ಸಮೆ
ದಳಕಾಲಂಕಾರಕಾಯ್ದು ಪೂವಂ ನಿನ್ನಾ ।
'ಮುಳಿದಳೆ ಸೀತೆ ಹರಣ ಬಾ
ಬಳಿಗೆ'ಂದಲರ್ವಳ್ಳಿಯಂ ಕರೆದು ಬೋಳಯಿಕುಂ ॥೧೩॥

ಸೀತೆ—ಅದಂತಿರಲಿ. ಪವನಾತ್ಮಜ, ಸ್ತ್ರೀಯರಿಗಿದು ಪ್ರಿಯವೆ; ನನಗಾದರೊ ದುಗುಡವನ್ನೂ ನಾಚಿಗೆಯನ್ನೂ ಉಂಟುಮಾಡುವುದು. ಹೇಳು, ಹೇಳು. ಅಧನ್ಯಳಾದ ನನ್ನ ಹೇತುವಿನಿಂದ ಈಗಲೂ ಆರ್ಯಪುತ್ರನು ಹಾಗೆಯೇ ಇರುವನೆ?

ಹನು—ಇಲ್ಲ, ಇಲ್ಲ. ನೆರವನ್ನು ಹೊಂದಿ ಈಗ ದೇವನು ಹದುಳದಿಂದಿರುವನು.

ಸೀತೆ—ಆರ್ಯಪುತ್ರನಾಪದ್ಬಾಂಧವನಾರೆಂದೀಗ ಹೇಳು.

ಹನು—ಮತ್ತೆ ನಾನಾಕಾಡಿಂದವರಿಬ್ಬರನ್ನು ಕರೆತಂದು, ಸಂಸ್ಕಾರವು ದೇಹಾತ್ಮರ ಸಂಬಂಧವನ್ನು ಕಲ್ಪಿಸುವಂತೆ ರಾಮಸುಗ್ರೀವರ ಕೆಳೆತನವನ್ನು ಮಾಡಿಸಿದೆನು.

ಸೀತೆ—ಆ ಬಳಿಕ ?

ಹನು—ಮತ್ತೆ ಸುಗ್ರೀವನು ಶ್ರೀರಾಮಚಂದ್ರನನುಗ್ರಹದಿಂದ ವಾಲಿ ಭಯವನ್ನು ಸಂಪೂರ್ಣವಾಗಿ ನೀಗಿ ಋಕ್ಷವಾನರರಿಂದ ಕೂಡಿದ ಸಮಸ್ತ ರಾಜ್ಯವನ್ನು ಸುಲಭವಾಗಿ ಹೊಂದಿದನು.

ಸೀತೆ—ಮತ್ತೆ ?

ಹನು—ಇಂತು ಸಿದ್ಧಾರ್ಥನಾದ ಸುಗ್ರೀವನು ನಿನ್ನನ್ನು ಹುಡುಕುವ ಸ್ವಾಮಿಕಾರ್ಯದಲ್ಲಿ ಕೆಯ್ಯಿಕ್ಕಿದನು.

ಸೀತೆ—ಆ ಮೇಲೆ ?

ಹನು—ಬಳಿಕ, ಪುಟ್ಟಿನಿಂದ ಕೆಳಗಣವರಾದರೂ ಬಲ್ಮೆಯಿಂದ ದೇವತೆಗಳನ್ನೂ ಮೀರುವ ವಾನರವೀರರನ್ನೂ ಋಕ್ಷಾಧಿಪತಿಗಳನ್ನೂ ಕಟ್ಟಾಣತಿಯಿತ್ತು ನಾಲ್ದೆಸೆಗಳಿಗೆ ಕಳುಹಿದನು.

ಸೀತೆ—ಆ ಬಳಿಕ ?

ಹನು—ಯುವರಾಜನ ಮತ್ತು ಜಾಂಬವಂತನ ಮುಂದಾಳ್ತನದಲ್ಲಿ ನಮ್ಮಿಂದ ಕೂಡಿದೊಂದು ಚಿಕ್ಕಪಡೆಯನ್ನು ಈ ದೆಸೆಗೂ ಕಳುಹಿದನು.

ಸೀತೆ—ಈ ದೆಸೆ ಶಂಕಾಸ್ಪದವೆ. ಮತ್ತೆ ?

ಹನು—ಬಳಿಕ ಎಲ್ಲಾ ವಾನರವೀರರಿದ್ದರೂ, ಮೊದಲು ನೋಡಿದ ನಂಬುಗೆಯಿಂದ ದೇವನು ನನ್ನನ್ನು ಏಕಾಂತದಲ್ಲಿ ಕರೆದು ಕೊಟ್ಟು ಹೇಳಿದನು.

ಸೀತೆ—(ಹರಿಸದಿಂದ) ಏನನ್ನೇನನ್ನು ?

ಹನು—(ಕಾಲಿಗೆರಗಿ ಉಂಗುರವನ್ನು ಕೊಡುವನು)

ಸೀತೆ—(ಸಂತೋಷದಿಂದ ತೆಗೆದುಕೊಂಡು ನೋಡಿ) ಇದೆ ಅಚ್ಚರಿಯುಂಗುರವು. ಇದನ್ನೆ ತಪಸ್ವಿಗಳಿತ್ತರು. ಇದನ್ನೆ ಕುಮಾರನು ತಂದನು. (ಉಂಗುರವನ್ನು ಹಿಡಿದು ಗೋಳಿಡುವಳು)

ಹನು—ಈಗಳೀ ದೇವಿ,

ಉಂಗುರಮನೊರ್ಮೆ ನಿರಿಪ
ಳ್ಮುಂಗುರುಳೊಳ್ಮುದ್ದುಗೆಯ್ವಳಂತಪ್ಪುವಳಾ ।
ಸಂಗದೆ ತೋಳ್ಗಳಿನೋರೊಂ
ದಂಗುಳಿಯಲ್ಲಿಟ್ಟು ನೋಳ್ಪಳುಸಿಕನೆಯಳಲಿಂ || ೧೪ ||

ಸೀತೆ—ಇದು ಲೋಕಾಭರಣನಾಭರಣವು, ಇದು ಬಿಲ್ಲಿನ ಹೆದೆಯಿಂದ ನೊಂದುದು, ಇದು ರಾಕ್ಷಸ ಮಾಯೆಯನ್ನು ತೋರುವುದು, ಇದಿರುಳಲ್ಲಿ ರತ್ನದೀಪವು, ಇದು ಮೊಗಸೊಬಗಿನ ಕನ್ನಡಿ.

ಹನು—ಈಕೆಯ ಶೋಕಾವೇಗವನ್ನು ನೋಡಿದರೆ ದೇವನು ಮೊದಲಿಂದ ನೂರ್ಮಡಿ ಹಲುಬಬೇಕು.

ಸೀತೆ—ಉಂಗುರವೆ, ಈಗ ನೀನೂ ಆರ್ಯಪುತ್ರನ ಕೆಯ್ಯಿಂದ ದೂರವಾದೆ. ನಿನ್ನನ್ನೂ ಆರ್ಯಪುತ್ರನು ಪಾಣಿಯಿಂದ ಹಿಡಿದನು. ನಿನಗೆಂತೀ ವಿಪತ್ತು ಸಮನಿಸಿತು? ನನ್ನಂತೆ ನೀನೂ ರಕ್ಕಸನ ಸೆರೆಯಾಳಾದೆಯಲ್ಲಾ!

ಹನು—ನೇಸರ್ಬಳಿಯಾಣ್ಮನ ಬೆರ
ಲಾಸರಮಂ ಬಿಟ್ಟು ನಿನ್ನ ವಿರಹಾನಳದಿಂ।
ದಾಸತ್ತಂಗಮನುಂಗುರ
ಮೀ ಸಮಯದೊಳಬ್ಬೆ ಸಂತಮಿಡುಗುಂ ನೀಡುಂ ॥೧೫॥

ಸೀತೆ—ನಾನೇನನ್ನು ಮಾಡಲಿ?

ಹನು—(ಸ್ವಗತ)
ಶರಮಂ ಪೋಲ್ವಂಗಂಗಳ
ಚರಿಸಲೊಡಂ ಮೇಗೆ ರೋಮಹರ್ಷಣದಿಂದುಂ।
ಗುರಮುದರ ಕರ್ನೆಳಲಿನಾ
ವರಿಸಿದ ಬಟ್ಟೆಯನೆ ನೋಳ್ಪನೀಕೆಯ ಮೆಯ್ಯೊಳ್ ॥ ೧೬ ॥

ಸೀತೆ—ನಾಮಾಕ್ಷರವನ್ನೀಗಳೋದುವೆನು. (ಅಂಗೆಯ್ಯಲ್ಲಿಟ್ಟು ನೋಡುವಳು)

ಹನು—ಮುತ್ತುವರಲ್ಗಳ ಪೆಂಪಂ
ಕುತ್ತಿಕ್ಕುವ ಕೆಂಕಮಾದ ಕರತಳದೊಳ್ಬೀ।
ಳ್ವೊತ್ತರದೆ ಕೆದರ್ಗಣ್ಬನಿ
ವೊತ್ತಂ ಪೋಲ್ಗುಂ ಹಿಮಾನಿಯಂ ಪಂಕಜದೊಳ್ ॥ ೧೭ ॥

ಸೀತೆ—ಒಳ್ಳಿದನೆ, ನಿನ್ನ ದರ್ಶನದಿಂದಲೆ ದೈವವನುಕೂಲವಿಹುದೆಂದರಿತೆನು. ನೀನಂಗುಳೀಯಕವನ್ನು ಕೊಟ್ಟುದರಿಂದಾದರೂ ಆರ್ಯಪುತ್ರನನ್ನು

ತಕ್ಕೈಸಿದೆನೆಂದೇ ಬಗೆವೆನು. ಈಗ ನನ್ನ ಹೃದಯವು ಅವನ ಮಾತನ್ನು ಕೇಳಲಾಸೆಪಡುವುದು. ಆದರೆ ನಿನ್ನನ್ನು ಗುರುತಿಸುವುದಕ್ಕೆ ಬೇರೇನೂ ಬೇಡ. ಆರ್ಯಪುತ್ರನ ಅಭಿಜ್ಞಾನವಚನಗಳನ್ನು ನನಗೆ ಹೇಳು.

ಹನು—ತಾಯಿ, ನೀನು ಮಾಯಿಗರ ನಾಡಲ್ಲಿರುವುದರಿಂದ ಗುರುತನ್ನು ಬಲಗೊಳಿಸುವದಕ್ಕಿದನ್ನೂ ಹೇಳಿದನು.

ಸೀತೆ—ಏನದು? ಹೇಳು. ಮನವಿತ್ತು ಕೇಳುವೆನು.

ಹನು—ತಾಯಿ, ಲಾಲಿಸಬೇಕು.

ಪಿಂತೊರ್ಮೆಯ್ತರೆ ಮಂದಿರಕ್ಕಿರುಳೊಳಾಂ ಪ್ರೋಕ್ತಂ ಕರಂ ಮಿಾರಿ ದೀ
ವಂ ತಾಂ ಕಂದಿರೆ ಕಂಡು ಕಳ್ಳ ನಿನಗಾಂ ದಂಡಂಗುಡಲ್ವೇಳ್ಕುಮೆಂ।
ದಿಂತಿವ್ಯಾಕ್ರತನೆ ಪೇಳ್ದು ಜೇಂಗರೆವ ಸುಲ್ಲೀಮಾಲೆಯಿಂ ತೋಳ್ಗಳಂ
ಕಾಂತೇ ಬಂಧಿಪ ಕಜ್ಜದಿಂ ಬಗೆಯುಮಂ ನೀನೆನ್ನ ದಲ್ಕುಟ್ಟಿದೈ ||೧೮||

ಸೀತೆ—(ಆನಂದದಿಂದ ಸ್ವಗತ) ಆಸೆಬಳ್ಳಿಯೇ, ಈಗ ನೀನು ಹೂವನ್ನು ಬಿಡು; ಮಾರುತಿ ನಿನಗೆ ಸೊದೆಯನ್ನೆರೆವುತ್ತಿಹನು. ಹೃದಯವೇ, ನಿನ್ನಲ್ಲಿಯೂ ಆರ್ಯಪುತ್ರನ ಪ್ರವೇಶಕ್ಕೆ ದಾರಿಯುಂಟು. ಹರಣವೇ, ನೀನೂ ಯಮಲೋಕಕ್ಕೆ ಹೊರಮುಟ್ಟು ಅರೆದಾರಿಯಿಂದ ಹಿಂದಿರುಗಿದೆ. (ಪ್ರಕಾಶ) ವಾಯುಪುತ್ರಾ, ನಿನ್ನೊಡನೆ ಏನನ್ನೋ ಹೇಳಲೆಳಸುವೆನು; ಆದರೆ ಏನನ್ನು ಹೇಳಲೆಂದರಿಯೆನು. ನಿನ್ನ ತಂದೆಯಾದ ಮಾರುತನು ಲೋಕದ ಹರಣವು; ನನಗಾದರೊ ನೀನೆ ಈಗ ಪ್ರಾಣವಾದೆ.

ಹನು—ಊಳಿಗದವರನ್ನು ಸಮಾಧಾನಪಡಿಸುವುದರಲ್ಲಿ ತಾಯಿ ಬಲು ಜಾಣೆ. (ಮೋರೆಯನ್ನು ತಗ್ಗಿಸುವನು)

ಸೀತೆ—ಪ್ರಭಂಜನಪುತ್ರಾ, ಹೇಳು, ಹೇಳು. ಇದು ದೊಡ್ಡಚ್ಚರಿಯಷ್ಟೆ. ಆವವುಪಾಯದಿಂದಿಲ್ಲಿಗೆ ಬಂದೆ? ಸಮುದ್ರವನ್ನಾದರೊ ಹೇಗೆ ದಾಟಿದೆ?

ಹನು—ಬಳಿಕ ಸುಗ್ರೀವನಾಜ್ಞೆಯನ್ನು ದೇವನ ಪ್ರಸಾದವೆಂದೆಣಿಸಿ ತಲೆಯಲ್ಲಿಟ್ಟು ವಾನರ ಸೈನ್ಯವೀ ದೆಸೆಗೆ ಹೊರಮುಟ್ಟಿತು.

ಸೀತೆ—ಮತ್ತೆ?

ಹನು ಆ ಬಳಿಕ,

ತೊರೆದಡಿಗಾಡೊಳ್ಗಗಕಂ
ದರದೊಳ್ಮೇಣ್ಕಡಲ ತೀರದೊಳ್ಕಪಿವೀರರ್ ।
ಮರೆಮುಣಿಸುನಿದ್ದೆಯುಮುನುರೆ
ಯರಸುತ್ತುಂ ನಿನ್ನನಂದು ಕಳಿದರ್ದಿನಮುಂ ॥ ೧೯ ॥

ಸೀತೆ—ಮತ್ತೇನಾಯ್ತು ?

ಹನು—ಆಗ ಶಪಥವು ಮೀರಿದುದರಿಂದ ಎಲ್ಲ ವಾನರಪತಿಗಳು ಪ್ರಾಯೋಪವೇಶಮಾಡಬೇಕೆಂದು ನಿರ್ಧಾರಿಸಿದರು.

ಸೀತೆ—ಹಾ ಕಷ್ಟ ! ಮತ್ತೆ ?

ಹನು—ಕಾಲವಶನಾದ ಜಟಾಯುವಿನಣ್ಣನಾದ ಸಂಪಾತಿಯೆಂಬ ಗೃಧ್ರರಾಜನಷ್ಟರಲ್ಲಿ ದನಿಯನ್ನು ಕೇಳಿಯಾ ತಾಣಕ್ಕೈಯ್ತಂದನು.

ಸೀತೆ—ಆ ಬಳಿಕ ?

ಹನು—ಬಳಿಕ ತಾಯೇ, ನಿನ್ನೀಯವಸ್ಥೆಯನ್ನು ಒಡನಿರುವವನಂತೆ ನಮಗೆ ಸ್ಪಷ್ಟವಾಗಿ ತಿಳುಹಿದನು.

ಸೀತೆ—ಆಹಾ ! ಎಂತಹ ನೆರವೀವ ಜಾತಿಯಿದು ! ಮೊದಲೂ ಈತನ ತಮ್ಮನು ನನಗಾಗಿ ಹರಣವನ್ನು ತೊರೆದನು. ಮತ್ತೆ ?

ಹನು—ಮತ್ತೆ ಆವನುಪದೇಶದಿಂದ ಹೆಗ್ಗಡಲನ್ನು ದಾಟಿದೆನು ; ಈ ಹೂದೋಟವನ್ನೂ ಹೊಕ್ಕೆನು.

ಸೀತೆ—ನೀನು ನನ್ನ ದುಗುಡಗಡಲನ್ನೆ ದಾಟಿದೆ. ವ್ಯಸನನಾವಿಕನಾದ ಮಾರುತಿಯೇ, ಹೇಳು. ನನ್ನೀ ವ್ಯಸನದ ಕೊನೆಗಾಲವೆಂದು ?

ಹನು—ನಿನಗೊಂದು ಸಂದೇಶವನ್ನು ದೇವನು ಕಳುಹಿರುವನು.

ಸೀತೆ—ಸಂದೇಶವುಂಟೆ ನನಗೆ ? ಆಹಾ ! ಧನ್ಯಳಾದೆನು.

ಹನು—ಇದೆ ಸ್ವಾಮಿಯ ಸಂದೇಶವು :—

ಸಭೆಯೊಳ್ಬಾಗಿಸಿ ಬಿಲ್ಲಂ
ವಿಭುಪಿತೃಗೃಹದತ್ತಣಿಂದೆ ತಂದೆಂ ನಿನ್ನಂ ।
ಸುಭಗೇ ರಣದೊಳ್ ರಾವಣ
ನ ಭಯಾಲಯದಿಂದಮಂತೆ ತರ್ಪೆಂ ನಿನ್ನಂ ॥೨೦॥

ಸೀತೆ—ಆರ್ಯಪುತ್ರನು ಮೊದಲು ರಕ್ಕಸನ ಹರಣವನ್ನು ಸೆಳೆದ್ರ ಬಳಿಕ ನನ್ನನ್ನು ತೆಗೆದುಯ್ಯುವನಷ್ಟೆ? ಹಾಗಾದರೆ ಸೀನೆತಕ್ಕೆ ತಡವಾ ಹುವೆ? ಬೇಗನೆ ಹೊರನುಡು. ಮುನಿಗಳ ಪ್ರಸಾದವಾದೀ ಚೂಡಾಮಣಿ ಯನ್ನು ತೆಗೆದುಕೊಳ್ಳು. ಆರ್ಯಪುತ್ರನೂ ಇದನ್ನು ನೋಡಿದೊಡನೆ ಹೆಚ್ಚಾಗಿ ಶೋಕಿಸುವನು. (ಚೂಡಾಮಣಿಯನ್ನು ಕೊಡುವಳು)

ಹನು—(ಸ್ವಗತ) ಆಹಾ! ತಾಯಿಗೆಂತಹ ವಸ್ತುಸ್ಥಿತಿಯರಿವೂ ದಾಕ್ಷಿ ಣ್ಯವೂ! (ಪ್ರಕಾಶ) ತಾಯಿಯನುಗ್ರಹಿಸಬೇಕು. (ಸ್ವೀಕರಿಸುವನು)

ಸೀತೆ—ಆರ್ಯಪುತ್ರನೆಂತು ದುವ್ಯಾನದಿಂದ ಹವ್ಮುದಂಬೋಗನೋ, ಅಂತು ನನ್ನ ವಾರ್ತೆಯನ್ನವನಿಗೆ ಹೇಳು.

ಹನು—ಅಜ್ಜಿಯನುಗ್ರಹದಿಂದ ಹಾಗೆಯೆ ಗೆಯ್ವೆನು.

ಸೀತೆ—ನೀನೀಗ ಹೋಗು. ನಾನೂ ಮೊದಲಿನಂತೆ ಸಿಸವೆಮರವನ್ನು ಸೇರಿ ನಿಮ್ಮ ವಾರ್ತೆಯನ್ನು ಹಾರೈಸುತ್ತಿರುವೆನು.

ಹನು—ದೇವಿಯಾಣತಿಯಂತಾಗಲಿ.

ಕೊಂದು ನಿಶಾಚರರಂ ಬಿ
ಲ್ಲಂ ದೂಡಿ ನಿನತ್ತು ದೇವಿ ಜೆಡೆಯಂ ರಾಮಂ।
ಸಂದೆಯಮಿಲ್ಲದೆ ಬಿಡಿಪಂ
ಸಂವರೆಗುರುಪಿಂದೆ ಕೂಡಿ ಶೋಭಿಪ ಕರದಿಂ ॥೨೧॥

ಸೀತೆ—ನಿನಗೆ ತೊಡರಾಗದಿರಲಿ.

(ಹೋಗುವರು)

ಇಂತು ಶ್ರೀರಾಮಕೃಷ್ಣಭಟ್ಟ ವಿರಚಿತವಾದ ಶಕ್ತಿಭದ್ರ ಮಹಾಕವಿಯ ಕನ್ನಡ ಚೂಡಾಮಣಿ ನಾಟಕದೊಳಾರನೆಯಂಕಂ ಮುಗಿದುದು.

---

# ಏಳನೆಯಂಕ

---

( ನಲ್ಲೆಯೊಡನೆ ವಿದ್ಯಾಧರನು ಬರುವನು )

ವಿದ್ಯಾ—ಸೌದಾಮಿನಿ, ವಿದ್ಯಾದೈವತವನ್ನು ಪೂಜಿಸುತ್ತಿದ್ದುದರಿಂದ ನನಗಿದುವರೆಗೆ ದೇವೇಂದ್ರಸೇವಾವಸರವು ನೆನಪಿಗೆ ಬರಲಿಲ್ಲ. ಆದರಿಂದ ಹೆಚ್ಚು ಬಳಲಿದರೂ ನನ್ನೊಡನೆ ಬೇಗನೆ ಬಾ. ತಕ್ಕ ಸಮಯಕ್ಕೆ ತಾಣವನ್ನು ಸೇರುವ.

ಸೌದಾ—ಪ್ರಿಯಾ, ಇದೊ ಬರುವೆನು.

ವಿದ್ಯಾ—ಸೌದಾಮಿನಿ, ಬಾ.

ಕಂಪುಣ್ಮಿಪ ಪೂಮಾಲಿಕೆ
ಯಂ ಪೇರೋಲೆವೊಳಪಿಂ ಸುರಾಧಿಪನ ಧನು ।
ಸ್ಸಂ ಪೆತ್ತ ತುರುಂಬಂ ನೀಂ
ಪೊಂಪುಳಿಯಿಂ ಕಟ್ಟು ಮೇಲುದಂ ಮೇಣ್ಚೆನ್ನೇ ॥ ೧ ॥

ಸೌದಾ—ಪ್ರಿಯಾ, ಅಂತೆ ಮಾಡುವೆನು.

( ಇಬ್ಬರೂ ಬಾಂದಳದಲ್ಲಿ ನಡೆವರು )

ವಿದ್ಯಾ—ಸೌದಾಮಿನಿ, ನೋಡು, ನೋಡು —

ನೆಗೆಯೆ ತಳಕೆ ನೀಲಾಂಬರ
ದಗಶೃಂಗಮನುಳಿದು ಬೇಗನಾಂ ಕ್ರಮದಿಂದಂ ।
ಬಗೆಯೆ ವಸುಂಧರೆ ಸಲೆ ನುಂ
ಗುಗುಮೆಂಬಿನಮಿರ್ಕುಮೆಲ್ಲ ಪುರುಳೋಳಿಗಳಂ ॥ ೨ ॥

ಸೌದಾ—ಪ್ರಿಯಾ, ಕುಲಪರ್ವತಗಳೀಗ ಚೆನ್ನಾಗಿ ಕಾಣಿಸುವುವಿಲ್ಲ.

ವಿದ್ಯಾ—ಆಹಾ! ನಮ್ಮ ದಾರಿನಡೆಯೆಂತು ಮನೋಹರವಾಗಿರುವುದು! ಒಂದೆಡೆಯಲ್ಲಿ ಪ್ರಿಯಾಪಯೋಧರಸ್ಪರ್ಶವು; ಇನ್ನೊಂದೆಡೆಯಲ್ಲಿ ದಿಗ್ವಧೂಪಯೋಧರಸ್ಪರ್ಶವು.

ಅಮರ್ದುಣಿನಾಡೆಲರಿಂ ತೋ
ಷಮನಾಂತು ಘನಾಳಿಯುಂ ಕಡಗವಜ್ಝರದಿಂ ।
ದಮರಂ ಗೀರುತೆ ಮರಕತ
ಸಮಕಾಂತಿಸುರಾಧ್ವದಿಂದೆ ಪೋದಪನೀಗಳ್ ॥೩॥

(ನೇಪಥ್ಯದಲ್ಲಿ)

ಇಂದಿಂ ಮುಂದೆ ನಿಶಾಚರಾರ್ತಿಭಯಮಂ ಬಿಟ್ಟಗ್ನಿ ಕೊಳ್ಗಾಜ್ಯಮಂ
ಮಿಂದೇಳ್ಬರ್ಮನಿಗಳ್ಜಪಿಕ್ಕೊಸಗೆಯಿಂ ಬಾಂಬೊಚ್ಚದೊಳ್ಸಂಜೆಯಂ ।
ಕುಂದಂ ತಾಳ್ದದೆ ಮಂದರಾದ್ರಿಗಿನವಾಹಂ ಪೋಕೆ ನೇರ್ದಾರಿಯಿಂ
ಸಂದೆಲ್ಲೆಯ್ದೆಯರಕ್ಕಸಿಕ್ಕುಗರಗೇಡಿಂ ಬೀಳ್ಗೆ ನಾಕಾರ್ಗಳಂ ॥ ೪ ॥

ವಿದ್ಯಾ—ಓಹೋ! ಏನಿದು ಜಗದ್ಘೋಷಣೆಯಂತಿದೆ! ರಾವಣನ ಸಂಹಾರವಾಗಿರಬೇಕು.

ಸೌದಾ—ನಾನೂ ಅದನ್ನೆ ಊಹಿಸುವೆನು. "ರಾಮನು ರಾಕ್ಷಸಕುಲವನ್ನು ಸಂಹರಿಸಿದನು; ರಾವಣನು ಮಾತ್ರ ಉಳಿದಿರುವನು" ಎಂದು ನಿನ್ನೆ ಸುದ್ದಿ ಹಬ್ಬಿತು.

ವಿದ್ಯಾ—ಈಗ ಮೂಲೋಕದ ಕಂಟಕವು ಹೋದಂತಾಯ್ತು.

ಸೌದಾ—ಈಗ ಹದಿಬದೆಗಳೆದೆಗುಸಿರು ಬಂದತ್ತು.

ವಿದ್ಯಾ—ನಾವೀಗ ಅಭೀಷ್ಟಸಿದ್ಧಿಯಿಂದ ಸಂತಸಗೊಂಡ ಇಂದ್ರನನ್ನು ಪೂಜಿಸುವ.

( ಹೋಗುವರು )

**॥ ಮಿಶ್ರವಿಷ್ಕಂಭ ॥**

---

( ಭೇರಿಯನ್ನು ಹೊಡೆವುತ್ತ ತಿರುಗಾಡುವ ಜಾಂಬವಂತನು ಬರುವನು)

ಜಾಂಬ—( ಗೋಸಣೆಯನ್ನು ಮತ್ತೊಮ್ಮೆ ಹೇಳಿ )

ವೇಗದೊಳೇರುತುಂ ನಮುಚಿಯಂ ತುಳಿದಂಘ್ರಿಯ ಮುಂದೆ ವಿಷ್ಣುವಾ
ನಾಗಳೆ ಭೇರಿಯಂ ಬಡಿದೆನೋಡುತೆ ಭೋಂಕನೆ ರಾಮನುಂ ತನ ।
ತ್ರೀಗಳಮಿತ್ರನಂ ತರಿದು ನೇಮಿಸಿದಂ ಮಗುಳೆನ್ನನಿಂತಿದೇ
ಭಾಗದೊಳೆಲ್ಲರುಂ ಜಗದೊಳಾದರಿಕುಂ ತಮಗಿಷ್ಟಕಾರ್ಯಮಂ ॥ ೫ ॥

ಇದೊಂದು ದೊಡ್ಡಹೊರೆ. ಒಳ್ಳಿತು. ನಾವೀಗ ಹೋಗುವೆವು. (ಹೋಗುವನು)

(ಯುದ್ಧವೇಷವನ್ನು ತೊರೆದು ರಾಮನು ಲಕ್ಷ್ಮಣವಿಭೀಷಣ ಸುಗ್ರೀವರೊಡನೆ ಪ್ರವೇಶಿಸುವನು)

ರಾಮ—(ವಿಭೀಷಣನನ್ನು ನೋಡಿ) ಕೆಳೆಯ ವಿಭೀಷಣ,

ಪೊಳಲಂ ಪುಗು ನೋಡಾಣ್ಮನ
ಸುಳಿದ ಜನಮನಂತೆ ಮಾಡ ನಲ್ಗಜ್ಜಮುಮಂ।
ಪೊಳಲಿಚರಾಕುಲಪವನಂ
ತಳೆಸು ಮಹಾಪತ್ತಿನೊಳ್ಸೊಗಂಬಡೆಗುಂ ದಲ್ ॥ ೬ ॥

ವಿಭೀ—ದೇವನು ಮನ್ನಿಸಬೇಕು. ನಾನು ಬಂಧುಸ್ನೇಹದಿಂದ ಹೇಳುವುದಲ್ಲ:—

ನೀಮೆತ್ತ ಸಾಧುಗಳದೆ
ತ್ತಾಮರಗುಲಿಗಳ್ಸೊಗಂಗುಡುಗುಮಿಂತಿರೆಯುಂ।
ಸ್ವಾಮಿಪಪಾಶ್ರಯಮೆನಗಾಂ
ಕಾಮಿಸೆನಗ್ರಜನ ಪೊಲ್ಲದಿಳೆಯುಂ ಸಿರಿಯುಂ ॥ ೭ ॥

ರಾಮ—ಆಗದಾಗದು. ಇದು ರಾಜಧರ್ಮವಲ್ಲ. ತಾನಾಗಿ ಬಂದ ಸಿರಿಯನ್ನವಮಾನಿಸಲಾಗದು. ಅಲ್ಲದೆ,

ಭರದಿಂ ನಿನ್ನೊಡನರನಂ
ಪೊರಗಟ್ಟಿದನಂದು ಕೂಳನಣ್ಣಂ ಸುಗುಣಾ।
ಕರ ನಿನ್ನಂ ಮುಂದಿಟ್ಟಾ
ಅರನುಂ ಪೌಲಸ್ತ್ಯಭೂಮಿಯುಂ ಪುಗುಗಿಂದೇ ॥ ೮ ॥

ವಿಭೀ—ದೇವಾ, ಇಂದು ಮೊದಲ್ಗೊಂಡು,

ಮನ್ನಣೆಗಾಳಪ್ಪೆಂ ನೀ
ನೆನ್ನಂ ಸೌಹಾರ್ದದಿಂದೆ ನೋಡಿದ ಕತದಿಂ।
ಬಾನ್ನವಿರಂ ಕೊಂಡುದರಿಂ
ಮನ್ನೆಯರಾಂಗುಂ ಚಿತಾಸ್ಥಿಯುಂ ಮಸ್ತಕದೊಳ್ ॥೯॥

ರಾಮ—ಮಿತ್ರ ಸುಗ್ರೀವಾ, ನಿನ್ನ ನೇಹಿಗನಾದ ವಿಭೀಷಣನು ಕಳವಳಗೊಂಡಂತಿರುವನು. ಮಾಡತಕ್ಕುದನ್ನೆಲ್ಲ ಮಾಡಿಸಿ ಇವನನ್ನು ಲಂಕಾಧಿಪತಿಯನ್ನಾಗಿ ಮಾಡು.

ಸುಗ್ರೀ—ದೇವನಾಣತಿಯಂತೆ. ಲಂಕೇಶ್ವರನೆ, ಇತ್ತ, ಬಾ.

(ಹೋಗುವರು)

ರಾಮ—ವಿಭೀಷಣನನ್ನು ಪಟ್ಟಮಣೆಯಲ್ಲಿ ಕುಳ್ಳಿರಿಸಿ ನಾನಿಂದು ಕೃತಕೃತ್ಯನಾದೆನು. ಏಕೆಂದರೆ—

ನೃಪನೊಳ್ಬೇಳ್ವರ ಬಗೆವ
ಳ್ಳಿ ಪಣ್ಣಿಡಿಯದಿರ್ದೊಡವನ ತಳೆಸೀಗುರಿದೋ।
ರಿಪ ಸಿರಿಯುಮಾಟಗಾರನ
ಕಪಟಶ್ರೀಯಿಂದೆ ಭಿನ್ನಮಪ್ಪುದದೆಂತೋ ॥೧೦॥

(ಹೊಕ್ಕು)

ಸುಗ್ರೀ—ದೇವನಿಗೆ ಜಯವಾಗಲಿ.

ರಾಮ—ಸುಗ್ರೀವಾ, ಏನಿದು ಹೋದೊಡನೆ ಹಿಂದೆ ಬಂದೆ?

ಸುಗ್ರೀ—ದೇವಾ, ಇದು ವಿಭೀಷಣನ ನುಡಿ-ಎಷ್ಟರವರೆಗೆ ದೇವಿ ಹೊಳಲಿಂದ ಹೊರಮಡುವುದಿಲ್ಲವೋ, ಅಷ್ಟರವರೆಗೆ ನಾನದನ್ನು ಹೊಗಲಾರೆನು.

ರಾಮ—(ಬಹುಮಾನದಿಂದ) ಹಾಗಾದರೆ ನೀನೆ ನಿನ್ನ ಕೆಳದಿಯನ್ನು ಕರೆದು ತಾ.

ಸುಗ್ರೀ—ದೇವನಪ್ಪಣೆ (ಹೋಗುವನು)

ರಾಮ—(ಸಂದೇಹದಿಂದ)

ಕೊಂದಾವಾಲಿಯನಬ್ಧಿಯೊಳ್ಗಿರಿಗಳಿಂ ಪೆರ್ವನ್ನದಿಂ ಸೇತುವಂ
ಬಂದಾಂ ಬಂಧಿಸಿ ಲಂಕೆಗಿತ್ತು ದಶಕಂಠಂಗಂತಮುಂ ವಾಯುವಾ।
ಕಂದಂ ಪೇಳ್ದ ದೃಢೋಕ್ತಿಯಿಂದೆ ಸತಿಯಂ ನೋಡಲ್ಕೆ ಕೌತೂಹಲಂ
ಬೊಂದಿರ್ದಪ್ಪೆನವರ್ಣಕಾಸ್ಪದಮಿವಳ್ಸಂವಾಸದಿಂದಾಗಳೋ ॥೧೧॥

ಲಕ್ಷ್ಮ—ಅಣ್ಣನು ಕರುಣಿಸಬೇಕು.

ಸೊಗಮುಂ ಪದೆಗುಂ ಪೆಣ್ಗಳ
ಬಗೆ ರಕ್ಕಸರಲ್ತೆ ದುರ್ವಿನೀತರ್ಜಗದೊಳ್ ।
ಮಿಗೆ ದೂರದೊಳಾಮಿರ್ದವು
ಬಗೆನನ್ನಿಯನಿಂತು ತಾಯ ನೋಡಲ್ವೇಳ್ಕುಂ ॥೧೨॥

ರಾಮ—ಲಕ್ಷ್ಮಣಾ, ಹನುಮಂತನೆಲ್ಲಿ?

ಲಕ್ಷ್ಮ—ಅವನೀಗ ರಣಭೂಮಿಯಲ್ಲಿ,

ವಾನರರಂ ಬರ್ದುಂಕಿಸಲೆ ಮೇಗಣ ಜಿಟ್ಟುಗಳಂ ಬಿಸುಳ್ಪನಂ
ತಾನನದಿಂ ನಿಶಾಚರರ ರಿಕ್ಷಪರಂ ಭರದಿಂದಮಾಳ್ವಪಂ ।
ಮೇನಡೆ ನೀಗುಗುಂ ಕಪಿಗಳಾಸರುಮಂ ಪುರನೀರಿನಬ್ಧಿಯೊ
ಳ್ಪೀನಭುಜಂ ದಶಾಸ್ಯನ ಹತಾಪ್ತರನಿತ್ತಪನಲ್ಲಿ ನಕ್ರಕಂ ॥೧೩॥

ರಾಮ—ಇವನೀ ಕೆಯ್ತುವು ಬಹು ಯುಕ್ತವಾದುದು.

(ನೇಪಥ್ಯದಲ್ಲಿ) ಮಹಾಜನರೇ, ದೂರ ಸರಿಯಿರಿ, ದೂರ ಸರಿಯಿರಿ.

ರಾಮ—ಲಕ್ಷ್ಮಣ, ಏನಿದು?

ಲಕ್ಷ್ಮ—ಅಣ್ಣ, ಇದು ಅತ್ತಿಗೆಯ ಬರವು.

ರಾಮ—ಮಹಾಜನರು ದೇವಿಯನ್ನು ಕುರಿತೇನನ್ನು ಹೇಳುವರೊ! ಲಕ್ಷ್ಮಣಾ, ಸುಗ್ರೀವನಿಗೆ ನನ್ನಾಣತಿಯನ್ನರುಹು-ಜನರನ್ನೋಡಿಸಬೇಡ. ಸೀತೆಯನ್ನಲ್ಲಿಯೆ ಅಂದಳದಿಂದಿಳಿಸಿ ಎಲ್ಲರಿಗೂ ಕಾಣುವಂತೆ ಕರೆದು ತರಬೇಕು.

ಲಕ್ಷ್ಮ—ಅಣ್ಣನಪ್ಪಣೆ. (ಹೋಗುವನು)

ರಾಮ—ರಾವಣನಂ ಪುಲ್ಗೆ ಬಗೆದು
ಭಾವದೊಳೈಕಾಗ್ರ್ಯದಿಂದಮಾವಗಮೆನ್ನಂ ।
ಸೇವಿಪ ಜಾನಕಿಯ ಚರಿ
ತ್ರಾವಿತರೂಪಮನದೀಗಳೀಕ್ಷಿಪುದೆಲ್ಲರ್ ॥೧೪॥

(ಲಕ್ಷ್ಮಣಸುಗ್ರೀವರೊಡನೆ ಸೀತೆ ಬರುವಳು)

ಇಬ್ಬರು—(ಎರಗುವರು) ಇತ್ತ, ಇತ್ತ.

(ನೇಪಥ್ಯದಲ್ಲಿ)

ಪಿರಿದುಂ ಬಾಗಿದ ತಲೆಯಿಂ
ದೆರಗುವ ಸುಗ್ರೀವಲಕ್ಷ್ಮಣರ ನೋಟಂಗಳ್ ।
ಚರಣದೊಳೆ ನಿಲ್ಕುಮರಸುಗು
ವರಿಯ ಸದಾಚಾರರೆಂತಿವಂದಿರ್ಥನ್ಯರ್ ॥೧೩॥

ಸೀತೆ—(ಸ್ವಗತ) ಲೋಕವು ನನ್ನನ್ನು ಕುರಿತೇನನ್ನು ಹೇಳುವುದೊ! ಪತಿದೇವನು ನನ್ನನ್ನೆಂತು ಬಗೆವನೊ! ಸ್ತ್ರೀಸ್ವಭಾವವು ನಂಬಲ್ತಕ್ಕುದಲ್ಲವಷ್ಟೆ. ಅಧನ್ಯಳಾದ ನನಗಾಗಿ ಕೋಟಲೆಗಡಲಿನಲ್ಲಿ ಬಿದ್ದ ನಾಥನು ತನ್ನ ತೋಳಿನಿಂದಲೆ ಮೇಗೆ ಬಂದನು. 'ಮೊದಲೂ ಬಿಲ್ಲಿನಿಂದ ನಿನ್ನನ್ನು ಕೈಯ್ಕೊಂಡನು; ಈಗಲೂ ಬಿಲ್ಲಿನಿಂದ ಪೊರೆವನು' ಎಂಬು ಮಾರುತಿ ನುಡಿದ ಮಾತು ಸತ್ಯವೆ.

(ಎಲ್ಲರೂ ಕೆಲಕ್ಕೆ ಬಂದು)

ಲಕ್ಷ್ಮ—ಆರ್ಯನಿಗೆ ಜಯವಾಗಲಿ.

ಸುಗ್ರೀ—ದೇವನಿಗೆ ಜಯವಾಗಲಿ, ಜಯವಾಗಲಿ.

ಸೀತೆ—ಆರ್ಯಪುತ್ರನಿಗೆ ಗೆಲ್ಲವಾಗಲಿ.

ರಾಮ—ದೇವಿ, ಇತ್ತ, ಇತ್ತ (ಎಂದಿಷ್ಟು ಮಾತ್ರ ಹೇಳಿದೊಡನೆ ಮೋರೆಯನ್ನು ತಿರುಹುವನು)

ಇಬ್ಬರೂ—ಇದೇನಿರಬಹುದು!

ರಾಮ—ಲಕ್ಷ್ಮಣ, ಹನುಮಂತನನ್ನೀಗಳೆ ಕರೆ.

ಲಕ್ಷ್ಮ—ಅಣ್ಣನಾಣತಿ. (ಹೋಗುವನು)

ರಾಮ—ಸುಗ್ರೀವಾ, ನೀನೀಕೆಯನ್ನು ಮೊದಲೆ ನೋಡಿಲ್ಲ?

(ಸುಗ್ರೀವನು ಹೆದರಿ ನಿಲ್ಲುವನು)

ರಾಮ—ಸುಗ್ರೀವ, ನೀನು ಮೊದಲೆಂದೂ ಕಾಣದ ವಿರಹಧರ್ಮವನ್ನೀಗ ನೋಡು :—

ಮೊಲೆಗಚ್ಚಂದನದಣ್ಪಂ
ತಲೆ ಕಂಪಂ ಮಲರ್ಗಳಿಂದೆ ಮುಡಿಯೊಳ್ವಸ್ತ್ರಂ ।
ಲಲಿತಾರುಣಕಾಂತಿಯುಮಂ
ಲಲನೆಯು ತಳೆಗುಂ ವಿಯೋಗದೊಳ್ ಹದಿಬದೆಯಾ ॥ ೧೬ ॥

ಸುಗ್ರೀ—ದೇವ, ನನ್ನ ತಪ್ಪಿಂದೀಕೆ ದೇವನ ಕಣ್ಣೆದುರಿಗೆ ಬಂದಳು.

ರಾಮ—ಒಳ್ಳಿತು. ಲಕ್ಷ್ಮಣನಾದರೂ ಇದನ್ನು ನೋಡುವುದಿಲ್ಲವಷ್ಟೆ!

ಸೀತೆ—(ಸ್ವಗತ) ಅಯ್ಯೋ ಕಷ್ಟ! ಅನಸೂಯೆಯ ಒಲ್ಮೆಯೂ ಈಗ ನನಗೆ ಶಾಪವಾಗಿ ಪರಿಣಮಿಸಿತು.

(ಲಕ್ಷ್ಮಣನೂ ಹನುಮಂತನೂ ಬರುವರು)

ಲಕ್ಷ್ಮ—ಆರ್ಯನಿಗೆ ಜಯವಾಗಲಿ.

ಹನು—ದೇವನಿಗೆ ಜಯವಾಗಲಿ.

ರಾಮ—ಲಕ್ಷ್ಮಣಾ, ಹನುಮಂತನೊಡನೆ ನೀನೀಕೆಯನ್ನು ನೋಡು.

(ಇಬ್ಬರೂ ಸೀತೆಯನ್ನು ನೋಡಿ ಮೋರೆಯನ್ನು ತಿರುಹುವರು)

ಹನು—ದೇವ, ಲಂಕೆಯಲ್ಲಿ ನಾನು ಕಂಡವಳೆ ಬೇರೆ; ಈಗ ಈಕೆ ಬೇರೆ.

ಸೀತೆ—ಆರ್ಯಪುತ್ರ, ನಾನೇನನ್ನೊ ಹೇಳಬೇಕೆಂದಿರುವೆನು.

ರಾಮ—ನಿನ್ನ ರೂಪವೆ ಎಲ್ಲವನ್ನೂ ಹೇಳುವುದು.

ಸೀತೆ—ಕುಮಾರ, ನೀನಾದರೂ ನನ್ನ ನುಡಿಯನ್ನು ಕೇಳು.

ಲಕ್ಷ್ಮ—ನಿನ್ನ ಮಾತನ್ನು ಕೇಳಿದುದರ ಫಲವಿದು.

ಸೀತೆ—ಪವನನಂದನಾ, ನೀನಾದರೂ ಕೇಳು.

ಹನು—ಆ ಕಾಲವು ಕಳೆದುಹೋಯ್ತು.

ರಾಮ—ಈಗಲೂ ನನ್ನೆದುರಲ್ಲಿ ನಿಂತಿರುವಳು!

ರಕ್ಕಸಬಾಣ್ಬರೊಡನೆ ಸಂ
ಪರ್ಕಕೆ ಸಂಕೇತವಿಟ್ಟು ದಂಡಕವನದೊಳ್ ।
ಉಕ್ಕೆವಮಿಲ್ಲದ ಬೆಳ್ಪರ
ನೆಕ್ಕತುಳಂ ಸಿತಗೆ ಪಂಚಿಸಿದೆ ನೀನೆಮ್ಮಂ ॥ ೧೭ ॥

ಸೀತೆ—(ಮುಗುಳ್ನಗೆಯಿಂದ) ಆರ್ಯಪುತ್ರನೂ ಕಠಿನವಚನವನ್ನು ಚ್ಚರಿಸುವನು!

ಸುಗ್ರೀ—ತನ್ನಾಣ್ಮನೀ ನುಡಿಯುವುಂ
ಕನ್ನೆಯಿವಳ್ಕೇಳ್ದು ಮಂದಹಾಸಂದೋರ್ಕುಂ।
ಉನ್ನತಚಾರಿತ್ರಳೊ ಮೇ
ಣನ್ನೆಯಗೀಳ್ವೆಣ್ಣೊ ಸರ್ವವಧುಗಳೊಳದರಿಂ ॥ ೧೮ ॥

ಸ್ವಾಮಿಯ ಕೆಲದಿಂದೀಕೆಯನ್ನು ಹೊರಗಟ್ಟಿರಿ. ಮಸಣಗಿಚ್ಚು ಕ್ಷೀರಾಹುತಿಯನ್ನೆಂತು ಪಡೆವುದು?

ಲಕ್ಷ್ಮ—ಶರೀರದೊಡನಿವಳು ಹೋಗಲು ಯೋಗ್ಯಳಲ್ಲ.

ಹನು—ದೇವ, ಈಕೆಗೆ ತಕ್ಕುದಾದ ದಂಡನೆಯನ್ನಪ್ಪಣೆಗೊಡಿಸು.

ಸೀತೆ—ಆರ್ಯಪುತ್ರನನುಮತಿಯಿಂದ ಕಿಚ್ಚಿಗೆ ಹಾರಲು ಬಯಸುವೆನು.

ರಾಮ—ಲಕ್ಷ್ಮಣ, ಈ ಹದಿಬದೆಯ ಬಯಕೆಯನ್ನು ನೆರವೇರಿಸು.

ಲಕ್ಷ್ಮ—ಅಣ್ಣನಪ್ಪಣೆ. (ಸ್ವಗತ) ಈಗ ಸಂತುಷ್ಟನಾದೆನು.

(ಪ್ರಕಾಶ) ದೇವಿ, ಇತ್ತ, ಇತ್ತ.

ಸೀತೆ—(ಸ್ವಗತ) ಹೃದಯವೇ, ಆರ್ಯಪುತ್ರನ ಅಡಿದಾವರೆಗೆರಗು.

(ಹೋಗುವರು)

ರಾಮ—ಹರೀಶ್ವರ, ಹನುಮಂತನು ನಾಯಕನಾಗಿರುವ ಪಡೆಯೊಡನೆ ಹೋಗಿ ನೀನೂ ಲಕ್ಷ್ಮಣನನ್ನು ಉಳಿದ ರಕ್ಕಸರ ದೆಸೆಯಿಂದ ಕಾಯು.

ಸುಗ್ರೀ—ದೇವನಾಣತಿ. (ಹೋಗುವನು)

ರಾಮ—ಏನಿದು, ನನ್ನ ಬಗೆ ಸೀತೆಯನ್ನು ಇದಿರಲ್ಲಿಯೂ ನಂಬದೆ ಈಗ ಬಹುಮಾನಿಸುವುದು? ತೊರೆದುದನ್ನು ಕುರಿತು ಚಿಂತಿಸಿ ಫಲವಿಲ್ಲ. ನನ್ನ ಯತ್ನವು ಲೋಕಹಿತಕ್ಕಾಗಿಯೆ ಆಗುವುದು.

(ರೋಮಾಂಚದಿಂದ ಕೂಡಿದ ಲಕ್ಷ್ಮಣನು ಬರುವನು)

ಲಕ್ಷ್ಮ—ಅಚ್ಚರಿ! ಅಚ್ಚರಿ!!

ರಾಮ—ಮಗೂ ಲಕ್ಷ್ಮಣಾ, ಮುಗಿಲೊಡ್ಡಿನೆಡೆಯಲ್ಲಿ ನಡೆವ ಇಂದ್ರಜಿತ್ತನ್ನು ಗೆದ್ದಾಗಲೂ ನಿನ್ನ ಮೆಯ್ಯಲ್ಲಿ ಹೀಗೆ ರೋಮಾಂಚವಿದ್ದುದಿಲ್ಲ. ಹೇಳು, ಹೇಳು. ಆವುದರಿಂದ ನಿನಗೀಯಾನಂದವೊಗೆಯಿತು ?

ಲಕ್ಷ್ಮ—ಅಣ್ಣನಾಣತಿಯಿಂದ ಕಡಲತಡಿಯಲ್ಲಿ ಕಟ್ಟಿಗೆಯ ರಾಶಿಗೆ ಕಿಚ್ಚನ್ನು ಕೊಟ್ಟೆನು.

ರಾಮ—(ಆದರದಿಂದ) ಆ ಮೇಲೆ ?

ಲಕ್ಷ್ಮ—ಬಳಿಕ ಅತ್ತಿಗೆ ಪ್ರಳಯಾಗ್ನಿಯಂತೆ ಉರಿವ ಕಿಚ್ಚನ್ನು ಮೂರು ಸರ್ತಿ ಬಳಸಿದಳು.

ರಾಮ—ಆ ಬಳಿಕ ?

ಲಕ್ಷ್ಮ—ಬಳಿಕ ದೇವಿ ನಿನಗೂ ಅಯೋಧ್ಯೆಯಲ್ಲಿರುವ ಹಿರಿಯರಿಗೂ ಪೊಡಮಟ್ಟು, ಹೀಗೆಯೆ ಹಿರಿಯರ ಮಾತನ್ನು ಅನುವರ್ತಿಸೆಂದು ನನ್ನೊಡನೆ ಹೇಳಿ, ಭರತ ಶತ್ರುಘ್ನರಿಗೂ ಇದನ್ನೆ ಹೇಳೆಂದು ನುಡಿದಳು. ಮತ್ತವಳಿಂತೆಂದಳು—'ಅಗ್ನಿದೇವನೆ, ನಿನ್ನಿದಿರಲ್ಲಿ ಪ್ರೂಣೆಯನ್ನು ಮಾಡುವೆನು. ಒಯ್ಯುವಾಗ ರಕ್ಕಸನ ತೋಳು ಸೋಂಕಿತು ; ಲಂಕೆಯಲ್ಲಿ ನನ್ನ ಕಾಲಿಗೆ ಅವನ ತಲೆ ಸೋಂಕಿತು' ಬಳಿಕ ಸಂದೆಯಪಡದೆ ನೀರನ್ನು ಹೊಗುವಂತೆ ನೀರ ಹಗೆಯನ್ನು ಹೊಕ್ಕಳು.

ರಾಮ—ಇದು ಆಶ್ಚರ್ಯಕರವಾದುದು. ಆ ಮೇಲೆ ?

ಲಕ್ಷ್ಮ—ಆಗ ಬಾನಿನಲ್ಲಿ ಶಂಖದುಂದುಭಿಗಳು ಮೊಳಗಿದುವು.

ರಾಮ—ಆ ಮೇಲೆ ?

ಲಕ್ಷ್ಮ—ಆಗ,

ಸನಿಯದೊಳಿವೆಯಿಕ್ಕದೆ ನೋ
ಳ್ಪಿನಮಾಮನವದ್ಯಭೂಸುತೆಯ ನಿಟ್ಟೆದಿರೊಳ್ ।
ಅನಲಂ ಬರ್ದಿಲವೊಗಂ ಮಿಂ
ಚಿನ ಮೆಯ್ಯಿಂ ದೇವನಕ್ಷಿಗೋಚರನಾದಂ ॥ ೧೯ ॥

ರಾಮ—ಆ ಬಳಿಕ ?

ಲಕ್ಷ್ಮ—ಮತ್ತೆ,

ಆರಡಿವಂಬಲ್ಕುಸುಮಿತ
ಭೂರುಹವಮಂ ತೊರೆದು ಪಾಯ್ದು ಕವಿದಾಗಸದಿಂ ।
ಪೇರಲರ್ವಳಿ ಬಿಳ್ದತ್ತಾ
ನಾರಿಯ ಮೇಗಲ್ಲಿಯಗ್ನಿ ಕಣ್ಮರೆಯಾದಂ ॥೨೦॥

ರಾಮ—ಒಳ್ಳಿತು. ನಾವೆ ಹೋಗಿ ನೋಡುವ. (ಇಬ್ಬರೂ ನಡೆವರು)

(ನೇಪಥ್ಯದಲ್ಲಿ)—(ದಿವ್ಯ ಗಂಧರ್ವರು ಹಾಡುವರು)

ಆವಂ ಮೂಜಗಮಂ ನಿಜೋದರದೊಳಂ ಪೊತ್ತಾವಗಂ ಜೋಗದಿಂ
ಪಾವಂ ಕ್ಷೀರಸಮುದ್ರದೊಳ್ಶಯನಮಂ ಮಾಡಿರ್ದನಂತಾವನಂ !
ಜೀವಂ ಹೋತೃ ಹುತಾಶನಂ ಹುತಮೆನುತ್ತುಂ ವೇದಮುಂ ಪೇಳ್ಗುಮಾ
ಶ್ರೀವತ್ಸಾಂಕನೆ ನೀಂ ಸರೋಜನಯನಾ ವೈದೇಹಿ ತಾಂ ಲಕ್ಷ್ಮಿಯೇ ॥೨೧॥

(ಬೇರೆಯವರು ಹಾಡುವರು)

ಮದಜಲದಿಂದಿಂದ್ರೇಭದ
ಬಿದುಗಿವಿಸೀಗುರಿಯನಂಕಿಸುತುಮಾಗಸವೊ ।
ಚ್ಚದ ಪದ್ಮಪರಾಗದೆ ಕೂ
ಡಿದೆಲರ್ನಿನ್ನಯ ರಣಾರ್ತಿಯಂ ನೂಂಕುಗೆ ತಾಂ ॥೨೨॥

ರಾಮ—ಈ ಗ್ರಾಮರಾಗವನ್ನು ಹಿಂದೆಂದೂ ನಾವು ಕೇಳಿಲ್ಲ.

(ಇಬ್ಬರೂ ಆಗಸವನ್ನು ನೋಡುವರು)

ರಾಮ—ಲಕ್ಷ್ಮಣಾ, ನೋಡು, ನೋಡು. ಹೊಳಪು ಹರಡಿದುದರಿಂದ ನೆಲವೂ ಬಾನೂ ಹೊಸತಾದಂತೆ ಕಾಣುವುವು.

ಮೇರುಶಿಖರಂಬೊಲೀ ಸೇ
ತೂರುನಗಂ ಕಲ್ಪಕಾನನಂಬೊಲೆ ವನಮುಂ ।
ತೀರದ ಪೊಂಬಣ್ಣದ ಕಪಿ
ವೀರರ ಪಡೆಯಿಾಗಳಾಂತುದಿರ್ಮುಡಿ ಸೊಂಪಂ ॥೨೩॥

(ನೇಪಥ್ಯದಲ್ಲಿ) ಸಗ್ಗಿಗರಾಣತಿಯಿಂದ ನಾನು ನಾರದನು ಬರುವೆನು.

(ಇಬ್ಬರೂ ವಿನಯದಿಂದ ನೋಡುವರು)

(ಹೊಕ್ಕು)

ನಾರದ—ಕಾರಣಮಾನುಷನಾದ ರಾವಣಾರಿಗೆ ಗೆಲ್ಲವಾಗಲಿ.

ರಾಮ—ಕಣ್ಣಾರೆ ಕಾಣುತ್ತಿದ್ದರೂ ಈಯಚ್ಚರಿಯನ್ನು ನಾವು ನಂಬಲಾರೆವು.

ನಾರ—ಇದರಿಂದ ಹೆಚ್ಚಿನಚ್ಚರಿಯೇನುಂಟು? ಸೇವ್ಯರಾದ ಇಂದ್ರಾದಿ ದೇವತೆಗಳು ತಾವಾಗಿ ಲಂಕೆಗೆ ಬರುತ್ತಿರುವರು.

ರಾಮ—ಓಹೋ! ಇದರಿಂದಲೆ ಅಂತಹ ಬೆಳಕು ಹರಿವುದು. ಭಗವಂತನನುಗ್ರಹದಿಂದ ಪವಿತ್ರನಾದ ನಾನು ಬೇರೆಯುವನೆಂದು ಬಗೆವೆನು.

ನಾರ—ಇವನೆ ಸಿಡಿಲ್ವಡಿಯಂ ಪತಿ
ದಿವಿಜರ ಮಳೆಯಾಣ್ಮನಂತೆ ಮೇಧಾತಿಥಿಯಾ।
ತವೆ ಮೇಷನಿವನ ಪೇಳ್ದಪ
ನವದಾನಮನಕ್ಷರಾಂಗಮುನಿ ಕಜ್ಜಗಳೊಳ್ ॥೨೪॥

ರಾಮ—ಬರ್ದಿಲರೊಡೆಯನಿಗೆರಗುವೆನು.

ನಾರ—ನೋಡು—
ಕರೆಗೊರಲಿಂದುರಿಗಣ್ಣಿಂ
ದುರದೊಳ್ಪಾವೊಡಮೆರನ್ನದಿಂದೀ ರುದ್ರರ್।
ಶಿರದೊಳ್ಚಂದ್ರನ ಪನ್ನೊಂ
ದಿರೆ ಕಳೆಗಳ್ಬಾದಿಯಾಂಗುಮುಯ್ವರ ಪುಡಿಯಿಂ ॥ ೨೫ ॥

ರಾಮ—ದೇವೋತ್ತಮರ್ಕಳಿಗೆ ಪೊಡಮಡುವೆನು.

ನಾರ—ಇವರು ವಸುಗಳು. ಇವರು ಅಶ್ವಿನೀದೇವತೆಗಳು.

ರಾಮ—ಲೋಕೋಪಕಾರನಿರತರಾದ ದೇವರ್ಕಳಿಗೆ ಮಣಿವೆನು.

ನಾರ—ಮನುವಂ ಮೊದಲೊಳ್ದಶರಥ
ನನಿರಿಸಿ ಕೊನೆಯಲ್ಲಿ ನಿನ್ನ ಪಿತೃಗಳ್ನಿಲ್ಕುಂ।
ಮನುಜೇಶರ್ಸಗ್ಗದ ಸೊಗ
ಮನುಳಿದು ನೀನಿತ್ತ ಪಿಂಡಮುಂ ದಲ್ಕೊಗ್ರ್ಗಂ ॥೨೬॥

(ಇಬ್ಬರೂ ಕಣ್ಣೀರನ್ನು ಸುರಿಸುತ್ತ ಮಣಿವರು)

ರಾಮು—ನೀಂ **ನೋಡ** ತಮ್ಮ ಕಣ್ಣಿಂ

ತನ್ನಪ್ಪುವ ನಮ್ಮ ತಂದೆಯಂ ನೆರೆಯುವನುಂ ।
ನನ್ನಿಯನುಳಿಸಲ್ತೊರೆದನ
ದೆನ್ನಂ ಜೀವಿತದೊಡಂ ಮನೋನಿಶ್ಚಯದಿಂ ॥೨೭॥

ಲಕ್ಷ್ಮ—ಅಣ್ಣಾ, ನನಗಿದೆಲ್ಲ ಕನಸಿನಂತೆ ಕಾಣುವುದು.

ರಾಮು—ಭಗವಂತನೆ, ದೇವತೆಗಳೂ, ರಿಸಿಗಳೂ, ಪಿತೃಗಳೂ ಇಲ್ಲಿಗೆ ಬರಲು ಕಾರಣವೇನು ?

ನಾರ—ನಿನ್ನ ರಾಣಿಯಾದ ಸೀತೆಯ ಪಾತಿವ್ರತ್ಯಪ್ರಭಾವವೆ.

ರಾಮು—ಅದ್ಭುತದರ್ಶನವೆ ನಮಗಿದರಲ್ಲಿ ನಂಬುಗೆಯನ್ನು ಕೊಟ್ಟಿತು. ಆದರೂ ಆಕೆಯ ಮೆಯ್ಯ ಬೆಡಗಿನಲ್ಲಿ ನನಗೆ ಸಂದೆಯವುಂಟು.

ನಾರ—ಆ ಬೆಡಗಿನ ಕಾರಣವನ್ನು ನೀನರಿಯೆಯಾ ?

ರಾಮು—ಭಗವಂತನೆ, ನಾನರಿಯೆನು.

ನಾರ—ಮಹರ್ಷಿಪತ್ನಿಯಾದ ಅನಸೂಯಾದೇವಿಯ ವರದಾನ ದಿಂದಷ್ಟೆ.

ರಾಮು—ಆಹಾ ! ದಂಡಕಾರಣ್ಯದಲ್ಲಿಯೂ ನನಗಿದು ಸಂದೇಹವ ನ್ನಿತ್ತಿತು ; ಆದರೆ ನಾನಾಕೆಯನ್ನು ಸ್ಪಷ್ಟವಾಗಿ ಕೇಳಲಿಲ್ಲ.

ನಾರ—ಆಕೆಯ ಮೆಯ್ಯಲ್ಲಿರುವುದೆಲ್ಲ ನಿನ್ನ ಕಣ್ಣಿಗೆ ತೊಡಿಗೆಯಾಗಿ ತೋರುವುದು ; ಎಂತೆಂದರೆ—

ಮಲಗುವ ಕಾಲದೊಳಂಟಿದ
ನೆಲವುಡಿ ಬಾವನ್ನವಾಯ್ತು ಕುಚಮಂಡಳದೊಳ್ ।
ನೆಲೆಮರದತ್ತಣಿನುದಿರ್ದೆಲೆ
ಗಲಕಾಲಂಕಾರಕಾಂತಿ ಸಮನಿಸಿತಾಗಳ್ ॥ ೨೮ ॥

ರಾಮು—ದೇವತೆಗಳಾಣತಿಯಂತಿರಲಿ. ನನಗೀಗ ಜ್ಞಾನದೃಷ್ಟಿಯುಳ್ಳ ಮತ್ತು ಸತ್ಯವಾದಿಯಾದ ನೀವೆ ಪ್ರಮಾಣವು.

ಲಕ್ಷ್ಮ—(ಸ್ವಗತ) ಆಶ್ಚರ್ಯ! ನಾವು ಕಿಚ್ಚಿನ ಕಿಡಿಯಂತಿರುವ ನುಡಿಯಿಂದ ಹೊಡೆದರೂ ಮಹಾದೇವಿ ಮುನಿಯಲಿಲ್ಲ.

ರಾಮ—ಭಗವಂತನೆ, ದೇವತೆಗಳೂ, ಪಿತೃಗಳೂ, ಮಹರ್ಷಿಗಳೂ ಏನನ್ನಾಜ್ಞಾಪಿಸುವರು.

ನಾರ—'ರಾವಣನ ಹರಣದೊಡನೆ ನಿನ್ನ ವನವಾಸಕಾಲವು ಕೊನೆಗಂಡಿತು. ಅದರಿಂದ ದೇವಿಯೊಡನೆ ನೀನು ಅಯೋಧ್ಯಾನಗರವನ್ನು ಹೊಗಬೇಕು' ಎಂದು.

ರಾಮ—ಧನ್ಯನಾದೆನು.

ನಾರ—ಹಾಗಾದರೆ ದೇವಿಯನ್ನು ಕರೆದುತರುವಂತೆ ಲಕ್ಷ್ಮಣನನ್ನಾಜ್ಞಾಪಿಸು.

ರಾಮ—(ಗುಟ್ಟಾಗಿ) ಲಕ್ಷ್ಮಣಾ, ಹೀಗಿರಲು ನಾವೇನನ್ನು ಮಾಡಬಹುದು?

ಲಕ್ಷ್ಮ—ಅಣ್ಣಾ, ಈ ವಿಷಯದಲ್ಲಿ ಸಂದೇಹಪಡಬೇಕೆಂದಿಲ್ಲ. ದೇವತೆಗಳೂ, ಪಿತೃಗಳೂ, ಮಹರ್ಷಿಗಳೂ ಈಕೆಯ ಹದಿಬದೆತನಕ್ಕೆ ಸಾಕ್ಷಿಗಳು.

ರಾಮ—(ಪ್ರಕಾಶ) ಲಕ್ಷ್ಮಣ, ಮಹರ್ಷಿಯಾಣತಿಯನ್ನು ನೆರವೇರಿಸು.

ಲಕ್ಷ್ಮ—ಆರ್ಯನಪ್ಪಣೆ. (ಹೋಗುವನು)

ನಾರ—ಆಹಾ! ನಿನ್ನ ಮಹಿಮೆಯಾಶ್ಚರ್ಯಕರವಾದುದು. ನೋಡು-

ರಾವಣನಂ ಕೊಂದೊಡನೀ
ತಾವಕಕೋದಂಡಮಾಗಳೆಲ್ಲರ ಪಗೆಯಂ ।
ದೇವೇಂದ್ರನ ಬಿಲ್ ರಘುಕುಲ
ಪಾವನ ಮುಗಿಲೊಡ್ಡುದೊಡಿಗೆಯಾದತ್ತಾದಂ ॥ ೨೯ ॥

ರಾಮ—ಅದಕ್ಕಾದರೊ ದೇವತೆಗಳೂ ಮುನಿಗಳೂ ಕಾರಣವು.

( ಸೀತೆಯೂ ಲಕ್ಷ್ಮಣನೂ ಬರುವರು )

ಸೀತೆ—ಈ ವೃತ್ತಾಂತದಿಂದ ನನಗೆ ನಾಚಿಕೆಯಾಗುವುದು; ಇಲ್ಲ, ಇಲ್ಲ, ಸಂತೋಷವೆ. ಒಯ್ಯುವಾಗ ಎಂತೋ ಆ ದುಷ್ಟನ ಹಸ್ತಸ್ಪರ್ಶವೂ ಲಂಕೆಯಲ್ಲಿ ಪಾದಸ್ಪರ್ಶವೂ ಉಂಟಾಯ್ತು. ಅಗ್ನಿಯಿಂದಲ್ಲದೆ ಬೇರಾವುದ ರಿಂದ ಆ ಪಾಪಿಯ ಮೆಯ್ಸೋಂಕಿನಿಂದ ಹಾಳಾದ ಗಾತ್ರಗಳು ಪರಿಶುದ್ಧಗಳಾ ಗುವುವು? (ನಡೆದು ನೋಡಿ) ಆರ್ಯಪುತ್ರನಿಗೆ ಜಯವಾಗಲಿ.

ರಾಮ—ದೇವಿ, ಇತ್ತ ಬಾ.

ಅರಪಂತೆಯೆಂದರಿತುಮಾ
ನರಸೀ ನಿನ್ನಂ ಸಮಂತು ಶಂಕಿಸಿದೆಂ ನ।
ಲ್ಲರನಗಲ್ದ ಬೇರೆ ಪೆಣ್ಗ
ಳ್ತಿರೆಯೊಳ್ವಿಶ್ವಾಸಕೆಂತು ಭಾಜನಮಪ್ಪರ್ ॥ ೩೦ ॥

ಸೀತೆ—ಆರ್ಯಪುತ್ರನೆ ಪರಮಾರ್ಥವಾಗಿ ನನ್ನನ್ನರಿವನು.

ರಾಮ—ದೇವಿ, ನನಗೆ ನಿನ್ನಲ್ಲಿ ನಲ್ಮೆಯಿದ್ದರೂ, ನನ್ನ ಭ್ರಾಂತಿಯಿಂ ದೊಳ್ಳಿತೆ ಆಯ್ತು; ಏಕೆಂದರೆ, ನಾವು ದೇವತೆಗಳನ್ನೂ ಮಹರ್ಷಿಗಳನ್ನೂ ಕಣ್ಣಾರೆ ಕಂಡೆವು.

(ಅಭಿಷಿಕ್ತನಾದ ವಿಭೀಷಣನು ಬರುವನು)

ವಿಭೀ—ದೇವನಿಗೆ ಜಯವಾಗಲಿ.

ರಾಮ—ವಿಭೀಷಣಾ, ಲಂಕೆಯಲ್ಲೇನು ವರ್ತಮಾನವು?

ವಿಭೀ—ಲಂಕೆಯ ಮಹಾಜನರು ದೇವನನ್ನು ಬಯ್ಯುವರು.

ರಾಮ—ಏನೆಂದು? ಏನೆಂದು? (ಕಳವಳದಿಂದ ನಿಲ್ಲುವನು)

ವಿಭೀ—'ಹಾಲಿನಲ್ಲಿ ಕಳ್ಳಿನ ಸೋಂಕನ್ನು ಶಂಕಿಸುವನು. ಮಿಶ್ರವಿಲ್ಲದ ಮಿಸುನಿ ಕಿಚ್ಚನ್ನು ಹೊಂದಲಾರದು. ಕತ್ತಲೆಯೆಂತು ದೀವಿಗೆಯನ್ನು ಮಸು ಳಿಸುವುದು?' ಎಂದು.

ರಾಮ—ಈಗ ಜನರ ನುಡಿಯನ್ನು ಕೇಳಿ ಸಮಾಧಾನವನ್ನು ತಳೆದೆನು.

ವಿಭೀ—ದೇವ, ಮಹಾದೇವಿಗೆರಗಿದ ನಾಗರಿಕರ ತಲೆಗಳಿನ್ನೂ ನಿಗುರಲಿಲ್ಲ.

ರಾಮ—ಜಾನಕಿಯ ಮಹಿಮೆಯೆಂತಹುದೆಂದು ನಾನೇ ಅರಿವೆನು.

ವಿಭೀ—ನೋಡು. ದೇವನಾದ ಪೊನ್ನೊಡೆಯನ

ಬಾಂದೇರಿದು ಪುಷ್ಪಕವೆಸ
ರಿಂದೆ ನೆಗಳ್ತೆವಡೆದತ್ತು ಸುಗುಣೋದನ್ವ |
ಚ್ಚಂದ್ರಾ ಲೋಕಂಗಳ ನೊಳ
ಪೊಂದಿದರ್ೊಡಮಿನ್ನುಮಾಸೆವೊಲ್ಪಿರಿದಿರ್ಕುಂ || ೩೧ ||

ರಾಮ—ಇದನ್ನು ದೆಸೆವಳ್ಳನಾದ ವೈಶ್ರವಣದೇವನಿಗೆ ಕಳುಹು.

ನಾರ—ಬೇಡ, ಬೇಡ. ಬಹುಕಾಲ ರಕ್ಕಸನ ಸೋಂಕಿನಿಂದ ಮಲಿನವಾದೀ ವಿಮಾನವನ್ನು ದೇವಿಯೂ ನೀನೂ ಕುಳಿತು ಶುದ್ಧಗೊಳಿಸಿದ ಬಳಿಕ ಸಾಕೇತದಿಂದ ಕೈಲಾಸಕ್ಕೆ ಕಳುಹು.

ರಾಮ—ಯುಕ್ತವಿದು. ಲಕ್ಷ್ಮಣ, ಮೊದಲು ದೇವಿಯನ್ನು ರಥವನ್ನೇರಿಸು.

ಲಕ್ಷ್ಮ—ಅಣ್ಣನಪ್ಪಣೆ.

ಸೀತೆ—ಹಂ.

ರಾಮ—(ಮುಗುಳ್ನಗೆಯಿಂದ)

ರಾಮನೆನಾಂ ದಿಟಂ ಸುದತಿ ಮಾಯಿಗನಾ ದಶಕಂಠನಲ್ತು ದ
ಲ್ಕಾಮಿನಿ ನಿನ್ನನೇರಿಸುಗುಮೆನ್ನನುಜಂ ರಥಿಯಲ್ತು ಯಾನಮುಂ |
ಸಾಮದ ಮಾತದಿರ್ಕೆ ಸರಸೀರುಹಪರ್ಣದ ಸೊಂಪನಿಕ್ಕುವೀ
ಕೋಮಳ ಹಸ್ತದಂಗುಳಿಯೊಳಿರ್ದಪುದಲ್ತೆ ಲಸದ್ವಿಭೂಷಣಂ ||೩೨||

ಸೀತೆ—ಅಚ್ಚರಿರನ್ನಗಳಿಗಿದೊ ಕೆಯ್ಮುಗಿವೆನು. ಇಲ್ಲದಿದ್ದರೆ ನಾನೆಂತು ಈಗ ನಿಜವಾಗಿ ಆರ್ಯಪುತ್ರನನ್ನು ಕಂಡುಹಿಡಿವೆನು?

ಲಕ್ಷ್ಮ—ತಾಯೇ, ದಂಡಕದಲ್ಲಿ ನಿನ್ನಾಣತಿಯಿಂದ ನಾನು ಹೊಂಗೆ ಹೊರಮಡಲು,

ರಕ್ಷಿಪುದೆನ್ನಂ ನೋಂಪಿಯಿ
ದಕ್ಷಂ ಕಣೆಯಲ್ತು ಸಾಕ್ಷಿಗಳ್ದೇವರೆ ನಿ।
ನ್ನಕ್ಷತವಾಯ್ತೀ ಮಾತು ತಿ
ತಿಕ್ಷೆಯನಿಡು ತಪ್ಪೊಳೆನ್ನ ನಿನ್ನಡಿ ಶರಣಂ ||೩೩||

(ನಮಸ್ಕರಿಸುವನು)

ಸೀತೆ—ಕುಮಾರ, ಏಳು, ಏಳು. ಇದರಲ್ಲಿ ತಪ್ಪೇನೂ ಇಲ್ಲ. ರಕ್ಕಸನ ತಲೆಸೋಂಕಿಂದ ಕೆಸರಾದ ನನ್ನ ಪಾದಗಳೀಗ ನಿನ್ನ ಪ್ರಕ್ಷಾಳನದಿಂದ ಪರಿಶುದ್ಧಗಳಾದುವು.

(ನೇಪಥ್ಯದಲ್ಲಿ)

ಅತಿಮಾನುಷಮಾದಿರ್ವರ
ಕೃತಿಮಹಿಮೆಯನಿಂದು ಕಂಡೆಪೂರ್ವಂ ತೊರೆದಂ।
ಧೃತಿಯಂ ದೇವಂ ಸತಿಯುಂ
ಹುತವಹನೊಳ್ತಳೆದಳಿಲ್ಲಮಾಣಂ ಕಂದಂ ||೩೪||

ನಾರ—ರಾಮಭದ್ರಾ, ಅಗ್ನಿದೇವನೇ ನಿನಗಿಂದು ಸಾಕ್ಷಿಯಾದನು.

(ಆಗಸದಲ್ಲಿ ಶಂಖದುಂದುಭಿಗಳು ಮೊಳಗುವುವು. ಎಲ್ಲರು ಬೆಕ್ಕಸದಿಂದ ನೋಡುವರು)

ನಾರ—ರಾಮಭದ್ರಾ, ತಾವು ಬೀಳ್ಕೊಳ್ಳುವುದರಿಂದ ದೇವತೆಗಳು ನಿನಗೆ ಹೊರವಡಬೇಕೆಂದು ಸೂಚಿಸುವರು.

ರಾಮ—ದೇವಿ ವೈದೇಹಿ, ಬಾ.

ಪೊಡವಡು ದೇವರ ಶಾಸನ
ದೊಡನಿಲ್ಲಿಗೆ ಬಂದ ದಿವ್ಯಮುನಿವರ್ಯಂಗೀ।
ಗಡಿವಂ ವೇದಕೆ ಮೇಣ್ಪೊಂ
ಬೊಡೆಯನ ಗಾಂಧರ್ವವಿದ್ಯೆಗಾಸರೆ ದೇವೀ ||೩೫||

( ಕೆಯ್ಯನ್ನು ಹಿಡಿದು ತೋರಿಸುವನು )

ಸೀತೆ—ಈಗ ಪತಿದೇವನ ಕೈಯ್ಯನ್ನು ಮುಟ್ಟಿದುದರಿಂದ ಉಂಗುರವು ಭೂತಾರ್ಥವನ್ನರುಹುವುದು. ರಕ್ಕಸನ ಮಾಯೆಯಿಂದ ಬಿಡುಗಡೆ ಹೊಂದಿರುವೆನೆಂದು ನನಗೆ ವ್ಯಕ್ತವಾಯ್ತು.

ರಾಮ—ಒಂದೊಮ್ಮೆ ರಕ್ಕಸಿಯ ಕಪಟದಿಂದ ವಂಚಿತನಾದ ನನಗೀಗಳಾಶ್ಚರ್ಯಚೂಡಾಮಣಿ ವಿಶ್ವಾಸವನ್ನಿತ್ತಿತು.

ನಾರ—ರಾಮಭದ್ರಾ, ನಾನು ದೇವತೆಗಳನ್ನು ಹಿಂಬಾಲಿಸುವೆನು ನಿನಗಿನ್ನಾವ ಅಭೀಷ್ಟವನ್ನೊದಗಿಸುವೆನು ?

ರಾಮ—ಧನ್ಯನಾದ ನಾನಿವರಿಂದ ಹೆಚ್ಚೇನನ್ನು ಬಯಸುವೆನು ಹಾಗಾದರೂ ಇದಿಷ್ಟು ಭರತವಾಕ್ಯವಾಗಲಿ :—

ಸುರಪಂಗಾವಗಮಿಾವ ಮಂತ್ರಶುಭಹವ್ಯಂ ತರ್ಕೆ ಸದ್ವೃಷ್ಟಿಯಂ
ಮರಲಂಬಂ ಪಳಿವಟ್ಟೆಯೊಳ್ಕರೆಯದಿರ್ಕುರ್ಕಿಂ ಸರಲ್ಸ್ನೇನೆಯಂ ।
ಅರಸರ್ಕಳ್ ನೃಪಧರ್ಮದಿಂದರಸುಗೆಯ್ಯುತ್ತಿರ್ಕೆ ರಾಜ್ಯಂಗಳೊ
ಳ್ತೊರೆದಂತಸ್ತಮುವಂ ಪ್ರಸಾದಗುಣಮುಂ ಕೆಯ್ಕೊಳ್ಗೆ ಜಾಣೆಲ್ಲರಾ ॥ ೩೬

( ಎಲ್ಲರೂ ಹೋಗುವರು )

ಇಂತು ಶ್ರೀರಾಮಕೃಷ್ಣ ಭಟ್ಟ ವಿರಚಿತವಾದ ಶಕ್ತಿಭದ್ರ ಮಹಾಕವಿಯ ಕನ್ನಡ ಚೂಡಾಮಣಿ ನಾಟಕದೊಳೇಳನೆಯಂಕಂ ಮುಗಿದುದು.

॥ ಇಂತು ಕನ್ನಡದೊಳಾಶ್ಚರ್ಯಚೂಡಾಮಣಿ ಮುಗಿದತ್ತು ॥

---

ತಿದ್ದು ಪಡಿ :—

ಪುಟ ೪೦–ಪಂಕ್ತಿ ೬. ಗೆನ್ನಲೆ ಎಂಬುದನ್ನು ಗೆನ್ನಯ ಎಂದು ಓದುವುದು